KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೨೩, ೨೦೧೧, (ಆಷಾಢ ೨, ಶಕ ವರ್ಷ ೧೯೩೩) | ಸಂಚಿಕೆ ೨೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ ಯಳಂದೂರು ತಾಲ್ಲೂಕು ಗೌಡಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಂಡ ಅಲ್ಕೆರೆ ಅಗ್ರಹಾರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/2010–11/95, ದಿನಾಂಕ 12–01–2011.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆ ಯಳಂದೂರು ತಾಲ್ಲೂಕು ಗೌಡಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಅಲ್ಕೆರೆ ಅಗ್ರಹಾರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ನಂಜನಗೂಡು, ದಿನಾಂಕ : 27–01–1994 ರಂದು ನೀಡಿರುವ ಆದೇಶದ ಪ್ರಕಾರ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 12–01–2011ರ ಪತ್ರದಲ್ಲಿ ಕೋರಿರುತ್ತಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 20–03–1986ರ ಪ್ರಕಾರ ಭೂಸ್ವಾಧೀನಕ್ಕೆ ಒಳಪಟ್ಟ ಭೂಮಾಲೀಕರು ದಿನಾಂಕ : 08–06–1989 ರಂದು ರಚಿಸಿದ ಐತೀರ್ಪಿನಂತೆ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರಡಿ ನಂಜನಗೂಡಿನ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ : 177/99ನ್ನು ಸಲ್ಲಿಸಿದ್ದರು. ನ್ಯಾಯಾಲಯವು ದಿನಾಂಕ : 27–01–1994 ರಂದು ನೀಡಿದ ಆದೇಶದಲ್ಲಿ ಪರಿಹಾರ ಮೊತ್ತವನ್ನು ಪ್ರತಿ ಎಕರೆಗೆ ರೂ. 15,000/–ಗಳಿಗೆ ಹೆಚ್ಚಿಸಿರುತ್ತದೆ. ಹೆಚ್ಚಿನ ಪರಿಹಾರ ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ಅಲ್ಕರೆ ಅಗ್ರಹಾರ ಗ್ರಾಮದ ಸರ್ವೆ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಧನದ ಮೊತ್ತ |
|---|---|---|---|---|
| 1 | 177/91 | 183 | 6–30 | 152715 |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಪತ್ರ ಸಂಖ್ಯೆ : ಆರ್‌ಡಿ 962 ಎಲ್‌ಸಿಎಂ 2009, ದಿನಾಂಕ : 23–05–2009 ರಂದು ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 13 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಚಾಮರಾಜನಗರ ಜಿಲ್ಲೆ ಯಳಂದೂರು ತಾಲ್ಲೂಕು ಅಲ್ಕೆರೆ ಅಗ್ರಹಾರ ಗ್ರಾಮಕ್ಕೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯ ನೀಡಿದ ಆದೇಶದಂತೆ ಪರಿಹಾರ ಮೊತ್ತ ರೂ. 1,52,715–00ಗಳನ್ನು (ಒಂದು ಲಕ್ಷದ ಐವತ್ತೆರಡು ಸಾವಿರದ ಏಳು ನೂರ ಹದಿನೈದು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702–0–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಪಿಆರ್.ನಂ. 970

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/2010–11/2337, ದಿನಾಂಕ 25–10–2010.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಲ್ಲನಕುಪ್ಪೆ ಮತ್ತು ಎಲಚವಾಡಿ ಗ್ರಾಮಗಳ ಜಮೀನುಗಳಿಗೆ ಹೆಚ್ಚುವರಿ ಸಿವಿಲ್ (ಹಿರಿಯ ವಿಭಾಗ) ರಾಮನಗರ ಎಲ್.ಎ.ಸಿ. ಸಂಖ್ಯೆ : 12/09ರಲ್ಲಿ ನೀಡಿದ ಆದೇಶದಂತೆ ರೂ. 7,26,233/–ಗಳ ಪರಿಹಾರ ಪಾವತಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 25–10–2010ರ ಪತ್ರದಲ್ಲಿ ಕೋರಿದ್ದಾರೆ.

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ನೀರಾವರಿ ಸಣ್ಣ ಕೆರೆಯ ನಿರ್ಮಾಣಕ್ಕಾಗಿ ಕಲ್ಲನಕುಪ್ಪೆ ಗ್ರಾಮದ ಸರ್ವೆ ನಂಬರ್ 24/6, 24/4, 21/3ಬಿ, 23/1ಬಿ, 24/1, 25/7 ಹಾಗೂ ಯಲಚವಾಡಿ ಗ್ರಾಮದ ವಿವಿಧ ಸರ್ವೆ ನಂಬರ್ 80, 81/1ಬಿ, 169/1, 53/1ರಲ್ಲಿ ಸ್ವಾಧೀನಪಡಿಸಿಕೊಂಡು ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 1000/– ಗಳಂತೆ ನಿಗದಿ ಮಾಡಿ ಐತೀರ್ಪನ್ನು ದಿನಾಂಕ : 26–08–2010 ರಂದು ರಚಿಸಲಾಗಿದೆ.

ಐತೀರ್ಪಿನಂತೆ ಪರಿಹಾರ ಪಡೆದ ಶ್ರೀ ವೀರಭದ್ರೇಗೌಡ, ಕಲ್ಲನಕುಪ್ಪೆ ಗ್ರಾಮದ ಸ.ನಂ. 23/2ರ 0–30 ಎಕರೆ ಜಮೀನಿನ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ರಾಮನಗರ ಇಲ್ಲಿ ಎಲ್.ಎ.ಸಿ. ಸಂಖ್ಯೆ : 12/09ನ್ನು ಸಲ್ಲಿಸಿದ್ದು, ನ್ಯಾಯಾಲಯ ದಿನಾಂಕ : 20–01–10ರಂದು ನೀಡಿರುವ ಆದೇಶದಲ್ಲಿ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 50,000/–ಗಳಿಗೆ ಹೆಚ್ಚಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹ ಪ್ರಕರಣವಲ್ಲವೆಂದು ಕಾನೂನು ಅಧಿಕಾರಿ– III ಕಂದಾಯ ಇಲಾಖೆ ಇವರು ಪತ್ರ ಸಂಖ್ಯೆ : ಆರ್‌ಡಿ 354 ಎಲ್‌ಸಿಎ 2010, ದಿನಾಂಕ : 23–06–10ರಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಈ ತೀರ್ಪಿನ ಅನುಸಾರ ತಮಗೂ ಪರಿಹಾರ ನೀಡಬೇಕೆಂದು ಕಲ್ಲಕುಪ್ಪೆ ಗ್ರಾಮದ ಸರ್ವೆ ನಂಬರ್ 80ರ 0–11 ಎಕರೆ ಜಮೀನಿನ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಅರ್ಜಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ದಿನಾಂಕ : 26–08–2010ರಂದು ವಿಶೇಷ ಭೂಸ್ವಾಧೀನಾಧಿಕಾರಿಗಳು ಕಲಂ 28(ಎ)ರಡಿ ರೂ. 7,26,233/–ಗಳ ಪರಿಹಾರಕ್ಕಾಗಿ ಐತೀರ್ಪು ಘೋಷಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 161 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ರಾವುತನಹಳ್ಳ ಕೆರೆ ನೀರಾವರಿ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲನಕುಪ್ಪೆ ಗ್ರಾಮದ ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳ ಜಮೀನುಗಳಿಗೆ ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಇವರು ಹೊರಡಿಸಿದ ಐತೀರ್ಪಿನಂತೆ ರೂ. 7,26,233–00ಗಳ (ಏಳು ಲಕ್ಷದ ಇಪ್ಪತ್ತಾರು ಸಾವಿರದ ಇನ್ನೂರ ಮೂವತ್ತೂರು ರೂ.ಗಳು ಮಾತ್ರ) ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಕೂಡಲೇ ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ–III ರಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 971

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 23–11–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/6190.
2. ಸರ್ಕಾರದ ಆದೇಶ ಸಂಖ್ಯೆ : ಸನೀಇ 185 ಭೂಸ್ವಾಪ್ರ 2006, ದಿನಾಂಕ : 22–01–07.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಹುಕ್ಕೇರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ನೀಡಿದ ಆದೇಶದಂತೆ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ : 23–11–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 29–12–1994ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ : 18–09–1998 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರಡಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಸಂಖ್ಯೆ : 130/01 ಮತ್ತು 131/01ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಕ್ರಮವಾಗಿ ದಿನಾಂಕ : 17–12–04 ಮತ್ತು 27–06–05 ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ. 2.00 ಲಕ್ಷಗಳ ಬೆಲೆಯನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ತೀರ್ಪಿನ ವಿರುದ್ಧ ಸಹಾಯಕ ಆಯುಕ್ತರು, ಬೆಳಗಾವಿ ಉಪ ವಿಭಾಗ, ಬೆಳಗಾವಿ ಇವರು ಕರ್ನಾಟಕ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ, ಧಾರವಾಡ ಇಲ್ಲಿ ಮೇಲ್ಮನವಿ ಎಂ.ಎಫ್.ಎ. ಸಂಖ್ಯೆ : 4708/05 ಮತ್ತು 5446/06 ಗಳನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ : 03–10–08 ಮತ್ತು 24–11–08 ರಂದು ವಜಾ ಮಾಡಿದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಲಾ 17 ಎಲ್‌ಬಿಎಸ್ 2009, ದಿನಾಂಕ : 12–01–2009 ಮತ್ತು ಸಂಖ್ಯೆ : ಲಾ 216 ಎಲ್‌ಬಿಎಸ್ 2009, ದಿನಾಂಕ : 27–02–2009ರಲ್ಲಿ ಅಭಿಪ್ರಾಯ ನೀಡಿದೆ.

ಎಲ್‌ಎಸಿ ಸಂಖ್ಯೆ : 130/1 (ಎಂಎಫ್‌ಎ 4708/05)ರ ಪ್ರಕರಣದಲ್ಲಿ ಶೇ.50ರಷ್ಟು ಮೊತ್ತ ರೂ. 3,90,134/–ಗಳನ್ನು ಠೇವಣಿ ಮಾಡಲು ಈಗಾಗಲೇ ಮೇಲೆ (2)ರಲ್ಲಿ ಓದಲಾದ ದಿನಾಂಕ : 22–01–07ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರಮ ಸಂಖ್ಯೆ | ಎಲ್‌ಎಸಿ ಸಂಖ್ಯೆ | ಎಂಎಫ್‌ಎ | ಕಮತನೂರ ಗ್ರಾಮದ ಸರ್ವೆ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 130/01 | 4708/05 | 305/9 | 0–20 | |
| 2 | 131/01 | 5446/06 | 305/17 | 0–27 | 5,30,651–00 |
| ಒಟ್ಟು | | | | | 5,30,651–00 |

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 155 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಪರಿಹಾರ ಮೊತ್ತ ರೂ. 5,30,651–00ಗಳನ್ನು (ಐದು ಲಕ್ಷದ ಮೂವತ್ತು ಸಾವಿರದ ಆರು ನೂರ ಐವತ್ತೊಂದು ರೂಪಾಯಿಗಳು ಮಾತ್ರ)ಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ– IIIರಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 972

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡೋಳ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/125 ದಿನಾಂಕ 11–01–2011.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡೋಳ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಡೋಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ.

ಈ ಪ್ರಕರಣದಲ್ಲಿ ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆಯನ್ನು ದಿನಾಂಕ : 07–02–08ರಂದು ಹೊರಡಿಸಿದೆ. ಭೂಸ್ವಾಧೀನಾಧಿಕಾರಿಗಳು ದಿನಾಂಕ : 07–05–2009 ರಂದು ರಚಿಸಿರುವ ಐತೀರ್ಪಿನಲ್ಲಿ ಈ ಜಮೀನಿನ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆಗೆ ರೂ. 35,000/– ನಿಗದಿಪಡಿಸಿದ್ದಾರೆ. ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಆಳಂದ ಇಲ್ಲಿ ಕೆಳಕಂಡ ಎಲ್.ಎ.ಸಿ. ಗಳನ್ನು ಸಲ್ಲಿಸಿದ್ದು, ನ್ಯಾಯಾಲಯವು ವಿವಿಧ ದಿನಾಂಕಗಳಂದು ನೀಡಿರುವ ಆದೇಶದಲ್ಲಿ ಈ ಜಮೀನುಗಳ ಮಾರುಕಟ್ಟೆ ಬೆಲೆಯನ್ನು ಪ್ರತಿ ಎಕರೆ ರೂ. 1.03,800/–ಗಳನ್ನು ನಿಗದಿಪಡಿಸಿದೆ.

| **ಕ್ರಮ ಸಂಖ್ಯೆ** | **ಎಲ್ಎಸಿ ಸಂಖ್ಯೆ** | **ತಡೋಳ ಗ್ರಾಮದ ಸರ್ವೆ.ನಂ.** | **ವಿಸ್ತೀರ್ಣ ಎ–ಗುಂ** | **ಪರಿಹಾರ ಮೊತ್ತ (ರೂ.ಗಳಲ್ಲಿ)** |
|---|---|---|---|---|
| 1 | 71/09 | 120/3 | 4–20 | 504898 |
| 2 | 70/09 | 114 | 17–14 | 1945233 |
| 3 | 72/09 | 115/ಅ,ಆ,ಇ | 1–10 | 140610 |
| 4 | 73/09 | 120/4 | 0–10 | 28522 |
| 5 | 74/09 | 113/2 | 0–03 | 8907 |
| 6 | 76/09 | 113/1 | 0–101 | 28522 |
| **ಒಟ್ಟು** | | | | **2656692** |

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ 518 ಎಲ್‌ಸಿಜಿ 2010, ಆರ್‌ಡಿ 516 ಎಲ್‌ಸಿಜಿ 2010, ಆರ್‌ಡಿ 515 ಎಲ್‌ಸಿಜಿ 2010, ಆರ್‌ಡಿ 514 ಎಲ್‌ಸಿಜಿ 2010, ಆರ್‌ಡಿ 513 ಎಲ್‌ಸಿಜಿ 2010, ಆರ್‌ಡಿ 519 ಎಲ್‌ಸಿಜಿ 2010, ದಿನಾಂಕ : 26–06–10 ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 24 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2011**

ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕು ತಡೋಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಡೋಳ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ವಿವರಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ನೀಡಲು ರೂ. 26,56,692–00ಗಳನ್ನು (ಇಪ್ಪತ್ತಾರು ಲಕ್ಷದ ಐವತ್ತಾರು ಸಾವಿರದ ಆರು ನೂರ ತೊಂಬತ್ತೆರಡು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.

3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 973

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಧಾರವಾಡ ತಾಲ್ಲೂಕು ಹೂಲಿಕೇರಿ ಇಂದ್ರಮ್ಮ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲಿಕೇರಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2010–11/5435 ದಿನಾಂಕ 01–10–2010.

**ಪ್ರಸ್ತಾವನೆ:**

ಧಾರವಾಡ ತಾಲ್ಲೂಕು ಹೂಲಿಕೇರಿ ಇಂದ್ರಮ್ಮ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲಿಕೇರಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ಹಾಗೂ ಉಪ ವಿಭಾಗಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿದ ಐತೀರ್ಪಿನಂತೆ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡವಂತೆ ಮೇಲೆ ಓದಲಾದ ದಿನಾಂಕ : 01–10–10ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿದ್ದಾರೆ.

ಧಾರವಾಡ ತಾಲ್ಲೂಕು ಹೂಲಿಕೇರಿ ಇಂದ್ರಮ್ಮ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿದ್ದ ಜಮೀನುಗಳ ಸ್ವಾಧೀನಕ್ಕಾಗಿ 4(1)ರ ಅಧಿಸೂಚನೆಯನ್ನು ದಿನಾಂಕ : 20–12–79ರಲ್ಲಿ ಹೊರಡಿಸಿದ್ದು, ಸ್ವಾಧೀನಪಡಿಸಿಕೊಂಡ ಜಮೀನಿಗೆ ಪರಿಹಾರ ಧನದ ಐತೀರ್ಪನ್ನು ಭೂಸ್ವಾಧೀನಾಧಿಕಾರಿಗಳು, ದಿನಾಂಕ : 03–11–82ರಂದು ಹೊರಡಿಸಿರುತ್ತಾರೆ.

ಐತೀರ್ಪಿನಂತೆ ಪರಿಹಾರ ಪಡೆದ ಹೂಲಿಕೇರಿ ಗ್ರಾಮದ ಸ.ನಂ. 6/2ರ 3–00 ಎಕರೆ ಜಮೀನಿನ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ 2ನೇ ಅಧಿಕ ದಿವಾಣಿ ನ್ಯಾಯಾಧೀಶರು (ಹಿರಿಯ ಶ್ರೇಣಿ) ಧಾರವಾಡ ಇಲ್ಲಿ ಎಲ್.ಎ.ಸಿ. ಸಂಖ್ಯೆ : 1/08ನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆಗೆ ರೂ. 15,000/–ಗಳನ್ನು ನಿಗದಿಪಡಿಸಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು 28(ಎ)ರಡಿ ಅರ್ಜಿ ಸಲ್ಲಿಸಿದ್ದು, ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಧಾರವಾಡ ಇವರು ಪ್ರತಿ ಎಕರೆಗೆ ರೂ. 15,000/– ರೂ.ಗಳಂತೆ ಹಾಗೂ ಇದರ ಮೇಲೆ ಶೇ. 30ರ ಸೋಲೇಷಿಯಂ, ಶೇ. 12ರಷ್ಟು ಹೆಚ್ಚುವರಿ ಮಾರುಕಟ್ಟೆ ದರ ಮತ್ತು 4(1)ರ ಅಧಿಸೂಚನೆ ದಿನಾಂಕ : 20–12–79 ರಿಂದ ಐತೀರ್ಪು ಘೋಷಿಸಿದ ದಿನಾಂಕ : 03–11–92ರವರೆಗೆ ಪಾವತಿಸುವಂತೆ ದಿನಾಂಕ : 30–06–10 ರಂದು ಐತೀರ್ಪನ್ನು ಹೊರಡಿಸಿರುತ್ತಾರೆ. ಪಾವತಿಸಬೇಕಾದ ಸ.ನಂ.ವಾರು ಮೊತ್ತದ ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಹೂಲಿಕೇರಿ ಗ್ರಾಮದ ಸರ್ವೆ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|
| 1 | 36 | 8–04 | 904491 |
| 2 | 7/3 | 1–15 | 153535 |
| 3 | 6/1 | 3–00 | 334978 |
| 4 | 7/2 | 2–00 | 223324 |
| | 7/4 | 0–17 | 47456 |
| 5 | 35/1 | 1–20 | 167493 |
| 6 | 17/2 | 0–05 | 14544 |
| | 17/1ಎ | 1–00 | 116036 |
| 7 | 35/2+3 | 2–00 | 223324 |
| 8 | 37/2 | 0–03 | 8374 |
| 9 | 33 | 5–03 | 590474 |
| 10 | 37/1 | 0–03 | 8188 |
| **ಒಟ್ಟು** | | | **2792217** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 137 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಧಾರವಾಡ ತಾಲ್ಲೂಕು ಹೂಲಿಕೇರಿ ಇಂದ್ರಮ್ಮ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲಿಕೇರಿ ಗ್ರಾಮದ ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳ ಜಮೀನುಗಳಿಗೆ ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿಗಳು, ಧಾರವಾಡ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಇವರು ಹೊರಡಿಸಿದ ಐತೀರ್ಪಿನಂತೆ ರೂ. 27,92,217–00ಗಳನ್ನು (ಇಪ್ಪತ್ತೇಳು ಲಕ್ಷದ ತೊಂಬತ್ತೆರಡು ಸಾವಿರದ ಇನ್ನೂರ ಹದಿನೇಳು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಕೂಡಲೇ ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ 01 ಬಿಎಸ್‌ಜಿ 2011, ದಿನಾಂಕ 19–03–2011 ರಲ್ಲಿ ಒದಗಿಸಿರುವ ಪೂರಕ ಅನುದಾನ– IIIರಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿಆರ್.ನಂ. 974 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಸದ/ಲೆಶಾ/ಲೆಸ–1/3/ಭೂಸ್ವಾಧೀನ/2010–11/1834, ದಿನಾಂಕ 17–08–2010.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲನಕುಪ್ಪೆ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ರಾಮನಗರ ಹೆಚ್ಚುವರಿ ಸಿವಿಲ್ ನ್ಯಾಯಾಲಯವು (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣ ಸಂಖ್ಯೆ : 12/09ರಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 2,04,881–00ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 17–08–2010ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 29–01–1987ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ : 22–11–1990 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರಡಿ ರಾಮನಗರಂ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ)ದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ : 12/09ರಲ್ಲಿ ಸಿವಿಲ್ ನ್ಯಾಯಾಲಯವು ದಿನಾಂಕ : 20–01–10ರಂದು ನೀಡಿರುವ ಆದೇಶದಲ್ಲಿ ಕಲ್ಲನಕುಪ್ಪೆ ಗ್ರಾಮದ ಸ.ನಂ. 23/2ರ 0–30 ಎಕರೆ ಜಮೀನಿಗೆ ಹೆಚ್ಚಿನ ಪರಿಹಾರಧನ ನಿಗದಿಪಡಿಸಿದೆ. ಅದರಂತೆ, ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ಕಲ್ಲನಕುಪ್ಪೆ ಗ್ರಾಮದ ಸರ್ವೆ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 12/09 | 23/2 | 0–30 | 2,04,881–00 |
| ಒಟ್ಟು | | | | **2,04,881–00** |

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಇದು ಅರ್ಹವಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 354 ಎಲ್‌ಸಿಎ 2010, ದಿನಾಂಕ : 23–06–10ರಲ್ಲಿ ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 126 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಲ್ಲನಕುಪ್ಪೆ ಗ್ರಾಮದ ಸರ್ವೆ ನಂಬರ್ 23/2ರ 0–30 ಎಕರೆ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ : 12/09ರಲ್ಲಿ ನೀಡಿರುವ ಆದೇಶದಂತೆ ರೂ. 2,04,881–00ಗಳನ್ನು (ಎರಡು ಲಕ್ಷದ ನಾಲ್ಕು ಸಾವಿರದ ಎಂಟುನೂರ ಎಂಭತ್ತೊಂದು ರೂಪಾಯಿಗಳು ಮಾತ್ರ)ಗಳ ಪರಿಹಾರವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಹಾಗೂ ಎರಡನೇ ಭಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ **"4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು"** ಅಡಿಯಲ್ಲಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 105 ಆಕೋ-1/11, ದಿನಾಂಕ 10-03-2011 ರಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಪೂರಕ ಅನುದಾನ- III ದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20-10-2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿಆರ್.ನಂ. 975

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಬೆಳಗಾವಿ, ಹಾಲಿ ಅಪರ ಆಯುಕ್ತರು (ಆಡಳಿತ ಮತ್ತು ಅಭಿವೃದ್ಧಿ) ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ :**
1. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಎಲ್-59/ಸಿಆರ್/20/2008 ದಿ: 04-11-2010.
2. ತನಿಖಾಧಿಕಾರಿಯವರ ವರದಿ ದಿನಾಂಕ 15-10-2010.
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.
4. ಸರ್ಕಾರದ ಆದೇಶ ಸಂ: ಸಿಆಸುಇ 68 ಕೆಇವಿ 08 ದಿ: 07-02-11.
5. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್ -59/ಸಿಆರ್/20/2008 ದಿ: 19-02-2011.

**ಪ್ರಸ್ತಾವನೆ :**

ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ಅಧಿಕಾರಿ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್, ಬೆಳಗಾಂ (ಹಾಲಿ ಅಪರ ಪ್ರಾದೇಶಿಕ ಆಯುಕ್ತರು, (ಆಡಳಿತ ಮತ್ತು ಅಭಿವೃದ್ಧಿ) ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ವಿಭಾಗ) ಇವರ ವಿರುದ್ಧ ಗುನ್ನೆ ಸಂಖ್ಯೆ: 27/2008ರಲ್ಲಿ ಪೊಲೀಸ್ ಅಧೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ (ವರ್ಗಾವಣೆಯಾದ ನಂತರ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆ ಪ್ರ.ಸಂ. 20/08) ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ (ಉಲ್ಲೇಖ-2) ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 04-11-10 (ಉಲ್ಲೇಖ-1 ರೊಡನೆ) ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988 ರ 19 (1)(ಬಿ) ಕಲಂನಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿದ್ದರು. ಅದರಂತೆ ಮೇಲೆ ಓದಲಾದ ಉಲ್ಲೇಖ(4) ರ ಆದೇಶದಲ್ಲಿ ಶ್ರೀ ಡಿ.ಬಿ. ನಾಯಕ್ ಕೆ.ಎ.ಎಸ್. ರವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಮಂಜೂರಾತಿಯನ್ನು ನೀಡಲಾಯಿತು. ನಂತರ ಮೇಲೆ ಓದಲಾದ ಉಲ್ಲೇಖ(5) ರ ಪತ್ರದಲ್ಲಿ ಮೂಲ ಆದೇಶದಲ್ಲಿ ಕೆಲವೊಂದು ನ್ಯೂನ್ಯತೆಗಳು ಕಂಡು ಬಂದಿದ್ದು ಅವುಗಳನ್ನು ಸರಿಪಡಿಸಿ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು ಕರ್ನಾಟಕ ಲೋಕಾಯುಕ್ತ ರವರು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಅಪರ ಪೋಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ (ಉಲ್ಲೇಖ-1) ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್-59/ಸಿಆರ್/20/2008 ದಿ: 4-11-2010. ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಪ್ರಥಮ ವರ್ತಮಾನ ವರದಿ ದಿನಾಂಕ: 09-09-2008.
2) ಶೋಧನಾ ಪಂಚನಾಮೆಗಳು:

1. ದಿನಾಂಕ 11-09-2008 ರಂದು ಆಪಾದಿತ ಅಧಿಕಾರಿಯವರ ವಾಸದ ಮನೆ ಸರ್ಕಾರಿ ವಸತಿಗೃಹ ವಿಶ್ವೇಶ್ವರಯ್ಯ ನಗರ ಬೇಳಗಾವಿಯ ಮನೆಯ ಶೋಧನಾ ಪಂಚನಾಮೆ.
2. ದಿನಾಂಕ: 11-09-2008 ರಂದು ಆಪಾದಿತರ ಮನೆ ನಂ. 49 ವೈಭವ ನಗರ ಬೆಳಗಾವಿಯ ಮನೆಯ ಶೋಧನಾ ಪಂಚನಾಮೆ.
3. ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 15-10-2010.

4. ತನಿಖಾಧಿಕಾರಿಯ ಅಂತಿಮ ವರದಿಗೆ ಅನುಬಂಧಿಸಿರುವ ಈ ಕೆಳಕಂಡ ಕಡತಗಳು:
   1. ಕಡತ ಸಂಖ್ಯೆ–1 ಮೊಕದ್ದಮೆ ಸಂ: 20/2008 ರ ಪ್ರಥಮ ವರ್ತಮಾನ ವರದಿ ಪಿ.ಎಫ್ ಪಂಚನಾಮೆ ಹಾಗೂ ಇತ್ಯಾದಿ ಇರುವ ಕಡತ– ಪುಟ ಸಂಖ್ಯೆ: 1 ರಿಂದ 198.
   2. ಕಡತ ಸಂಖ್ಯೆ–2 ಶ್ರೀಮಂತ ಭೋಗರಾಜ ದೇಸಾಯಿ ಸ್ವತಂತ್ರ ಪದವಿಪೂರ್ವ ಕಲಾ ಮತ್ತು ವೃತ್ತಿ ಶಿಕ್ಷಣ ಮಹಾವಿದ್ಯಾಲಯ ಯರಗಟ್ಟಿಗೆ ಹಾಗೂ ಶ್ರೀ ಸದಾಶಿವ ಕೈಗಾರಿಕಾ ತರಬೇತಿ ಶಿಕ್ಷಣ ಸಂಘ ಮುಧೋಳ ಗೆ ಸಂಬಂಧಿಸಿದ ದಾಖಲೆಗಳು ಇರುವ ಕಡತ – ಹಾಳೆ ನಂ. 1 ರಿಂದ 550.
   3. ಕಡತ ಸಂ. 3 ಯರಗಟ್ಟಿ ಗ್ರಾಮ, ಮುಧೋಳ ತಾಃ ಹಾಗೂ ಫ್ಲಾಟ್ ನಂ. 49 ಕಂಗ್ರಾಳಿ ಜಮೀನುಗಳು ಹಾಗೂ ನಿವೇಶನಗಳ ಕ್ರಯ ಪತ್ರ/ಖರೀದಿ ಕ್ರಯ ಪತ್ರ ಪಂಚನಾಮ, ಬ್ಯಾಂಕ್ ಖಾತೆ ಅಂಚೆ ಕಛೇರಿ ವಿವರ ಹಾಗೂ ಕಟ್ಟಡ ಮೌಲ್ಯಮಾಪನಕ್ಕೆ ದಾಖಲೆಗಳು ಇರುವ ಕಡತ– ಹಾಳೆ ನಂ. 1 ರಿಂದ 118.
   4. ಕಡತ ಸಂ. 4 ಅಧಿಕಾರಿಯ ವೇತನದ ವಿವರಗಳು, ಕೃಷಿ ವರಮಾನ, ಆರ್‌ಟಿ.ಸಿ. ಮತ್ತು ಅಂಚೆ ಕಛೇರಿ ಹಾಗೂ ಬ್ಯಾಂಕ್‌ಗಳಿಂದ ಪಡೆದಿರುವ ಸಾಲದ ವಿವರಗಳು ಹಾಗೂ ಕ್ರಯ ಪತ್ರ ದಾಖಲೆಗಳು ಇರುವ ಕಡತ – ಹಾಳೆ ನಂ. 1 ರಿಂದ 249.
   5. ಕಡತ ಸಂ: 5 ಅಧಿಕಾರಿಗಳು ಕೆ.ಎ.ಎಸ್. ವೃಂದಕ್ಕೆ ಸೇರಿದ ದಿನಾಂಕದಿಂದ ಸರ್ಕಾರಕ್ಕೆ ಸಲ್ಲಿಸಿರುವ 1984–85 ರಿಂದ 2007–08 ರವರೆಗಿನ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಗಳು ಇರುವ ದಾಖಲೆಗಳ ಕಡತ– ಹಾಳೆ ನಂ. 1 ರಿಂದ 172.
   6. ಕಡತ ಸಂ: 7 ಅಧಿಕಾರಿಗಳು ಪಾವತಿಸಿರುವ ಆದಾಯ ತೆರಿಗೆ ವಿವರ, ಕಟ್ಟಡ ನಿರ್ಮಾಣ, ನೀರು, ಮನೆ ಕಂದಾಯ ವಿದ್ಯಾಭ್ಯಾಸ, ಗನ್ ಹಾಗೂ ನಾಯಿ ನಿರ್ವಹಣೆಗಳಿಗೆ ವೆಚ್ಚ ಮಾಡಿರುವ ದಾಖಲೆಗಳು ಇರುವ ಕಡತ – ಹಾಳೆ ನಂ. 1 ರಿಂದ 75.
   7. ಕಡತ ಸಂ: 8 ದಾಳಿ ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷಿಗಳು ಇರುವ ಕಡತ ಹಾಳೆ ನಂ 1 ರಿಂದ 178.

ತನಿಖಾಧಿಕಾರಿ ಶ್ರೀ ಡಿ.ಟಿ. ಶ್ರೀನಿವಾಸ್, ಪೋಲಿಸ್ ಅಧೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಪೋಲೀಸ್ ಠಾಣೆ ಬೆಂಗಳೂರು ಇವರು ಶ್ರೀ. ಡಿ.ಬಿ. ನಾಯಕ್ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಬೆಂಗಳೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ನಾಟಕ ಲೋಕಾಯುಕ್ತ ಠಾಣೆ ಗುನ್ನೆ ನಂ. 27/2008 ರಲ್ಲಿ ಲಂಚ ನಿರೋಧಕ ಕಾಯ್ದೆ. 1988 ರ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ ಈ ಕೆಳಕಾಣಿಸಿದಂತೆ ತನಿಖಾಧಿಕಾರಿಗಳು

1. ದಿನಾಂಕ: 11–09–2008 ರಂದು ಆಪಾದಿತರು ವಾಸವಾಗಿದ್ದ ಮನೆ, ಸರ್ಕಾರಿ ವಸತಿ ಗೃಹ, ವಿಶ್ವೇಶ್ವರಯ್ಯ ನಗರ ಬೆಳಗಾವಿ, ಮನೆ ನಂ 49, ಬಾಕ್ಸೈಟ್ ರಸ್ತೆ ವೈಭವನಗರ ಬಿ.ಕೆ. ಕಂಗ್ರಾಳಿ ಬೆಳಗಾವಿ, ಪಂಚನಾಯಕನಹಳ್ಳಿ ಗೆಸ್ಟ್ ಹೌಸ್ ಮತ್ತು ಪಂಚನಾಯಕನಹಳ್ಳಿಯಲ್ಲಿರುವ ಶ್ರೀ. ಅಶೋಕ್ ಭೀಮಪ್ಪ ನಾಯಕ್ ರವರ ಮನೆಯನ್ನು ತನಿಖೆ ನಡೆಸಿರುತ್ತಾರೆ.
2. ದಿನಾಂಕ: 12–09–2008 ರಂದು ಆಪಾದಿತರಿಗೆ ಸಂಬಂಧಪಟ್ಟ ಯರಗಟ್ಟಿ ಎಸ್. ಪಿ.ಡಿ. ಪದವಿ ಪೂರ್ವ ಮಹಾವಿದ್ಯಾಲಯ ಯರಗಟ್ಟಿ ರನ್ನು ತನಿಖೆ ನಡೆಸಿರುತ್ತಾರೆ.
3. ದಿನಾಂಕ 12–09–2008 ರಂದು ಆರೋಪಿತರ ಸರ್ಕಾರಿ ಕಛೇರಿಯನ್ನು ಹಾಗೂ ಅನಧಿಕೃತವಾಗಿ ಸಂಪಾದನೆ ಮಾಡಲು ಸಹಾಯ ಮಾಡುತ್ತಿರುವ ಕೆಲವು ಜವರ ಮನೆಗಳನ್ನು ಜಪ್ತಿ ಮಾಡುವ ಉದ್ದೇಶದಿಂದ ಕೆಲವರ ಮನೆಗಳನ್ನು ತನಿಖೆ ನಡೆಸಿರುತ್ತಾರೆ.

ಮೇಲ್ಕಂಡ ಸ್ಥಳಗಳನ್ನು ದಿನಾಂಕ : 11–09–08 ಮತ್ತು ದಿ: 12–09–08 ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧನೆ ನಡೆಸಿರುತ್ತಾರೆ. ಆ ಸಂದರ್ಭದಲ್ಲಿ ತಯಾರಿಸಲಾದ ಶೋಧನಾ ಪಂಚನಾಮೆಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ, ಬೆಳ್ಳಿ ಬ್ಯಾಂಕ್ ಡಿಪಾಸಿಟ್‌ಗಳು, ವಾಹನಗಳು ಮತ್ತು ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಪತ್ತೆಯಾಗಿರುತ್ತವೆ.

ನಂತರದ ತನಿಖೆಯಲ್ಲಿ ಶ್ರೀ ಡಿ.ಟಿ. ಶ್ರೀನಿವಾಸ್ ಎಸ್.ಪಿ. ಕರ್ನಾಟಕ ಲೋಕಾಯುಕ್ತ ಬೆಂಗಳುರು ಗ್ರಾಮಾಂತರ ಜಿಲ್ಲೆ ಇವರು ಆಪಾದಿತ ಶ್ರೀ ಡಿ.ಬಿ. ನಾಯಕ್ ರವರಿಗೆ ಅನಧಿಕೃತವಾಗಿ ಸಂಪಾದನೆ ಮಾಡಲು ಸಹಾಯ ಮಾಡುತ್ತಿದ್ದ ಕೆಲವು ಜನರ ಮನೆಗಳನ್ನು ಜಪ್ತಿ ಮಾಡುವ ಉದ್ದೇಶದಿಂದ ಅವರು ಶ್ರೀ ಅಜೀತ ಜಾಧವ್ ಎನ್.ಎಸ್. ಚೌಗುಲೆ, ಸುರೇಶ್ ಚಿಂಡಕ, ರಮೇಶ್ ಚಿಂಡಕ, ದಯಾನಂದ ದಳವಾಯಿ ಮದನಕುಮಾರ ಭೈರಣ್ಣವರ ಇವರ ಬಗ್ಗೆ ದಿ: 15–09–2008 ರಂದು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಬೆಂಗಳೂರು ರವರ ಕಡೆಯಿಂದ ವಾರಂಟ್ ಪಡೆದು ಅವುಗಳನ್ನು ಜಪ್ತಿ ಮಾಡಲು ತಿಳಿಸಿದ ಮೇರೆಗೆ ದಿ: 18–09–2008 ರಂದು ಶ್ರೀ ಜಗದೀಶ್ ಪ್ರಸಾದ ಇವರು ಬೆಳಗಾವಿಗೆ ಬಂದು ಈ ಕೆಳಕಂಡ ಸಿಬ್ಬಂದಿ ಮತ್ತು ಪಂಚರ ಸಮಕ್ಷಮ ಸಂಬಂಧಪಟ್ಟ ಮನೆಗಳನ್ನು ಜಪ್ತಿ ಮಾಡಿರುತ್ತಾರೆ.

| ಅ. ನಂ. | ಶೋಧನಾ ಸ್ಥಳ | ತನಿಖಾಧಿಕಾರಿಯವರ ಹೆಸರು |
|---|---|---|
| 1 | ಶ್ರೀ ಅಜೀತ ಜಾಧವ ಇವರ ಮನೆ ಸಿ.ಟಿ.ಎಸ್. ನಂ. 4360 ಚವಾಟ ಗಲ್ಲಿ ಬೆಳಗಾವಿ | ಶ್ರೀ ಸುಧೀರ್ ಎಂ. ಹೆಗಡೆ ಪೋಲಿಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ದಾವಣಗೆರೆ |
| 2 | ಶ್ರೀ ಎನ್. ಎಸ್. ಚೌಗುಲೆ ಇವರಿಗೆ ಸೇರಿದ ಬೆಳಗಾವಿ ತಾಲ್ಲೂಕಿನ ಮಣ್ಣೂರು ಗ್ರಾಮದ ಮನೆ ನಂ. 491 ಲಕ್ಷ್ಮೀ ಗಲ್ಲಿ ಬೆಳಗಾವಿ | ಶ್ರೀ ಕೆ.ಎಂ. ಬಸವರಾಜಪ್ಪ, ಪೋಲಿಸ್ ಉಪಾಧೀಕ್ಷಕರು ಕರ್ನಾಟಕ ಲೋಕಾಯುಕ್ತ ದಾವಣಗೆರೆ |

| | | |
|---|---|---|
| 3 | ಶ್ರೀ ಎನ್.ಎಸ್. ಚೌಗುಲೆ ಇವರಿಗೆ ಸೇರಿದ ಪ್ಲಾಟ್ ನಂ. 3, ಬಿ–1 ಓಂಕಾರ ಇಂಡಸ್ಟ್ರೀಸ್ ಇಂಡಸ್ಟ್ರಿಯಲ್ ಏರಿಯಾ ಬೆಳಗಾವಿಯಲ್ಲಿರುವ ಕಛೇರಿ | ಶ್ರೀ ಕೆ. ಎಂ. ಬಸವರಾಜಪ್ಪ, ಪೋಲಿಸ್ ಉಪಾಧಿಕ್ಷಕರು ಕರ್ನಾಟಕ ಲೋಕಾಯುಕ್ತ ದಾವಣಗೆರೆ |
| 4 | ಬೆಳಗಾವಿ ಶಹರದ ಖಾಸಬಾಗ ನೇದ್ದರ ಜೋಶಿಮಾಳ ರಲ್ಲಿರುವ ಸುರೇಶ ಚಿಂಡಕ ಮತ್ತು ರಮೇಶ ಚಿಂಡಕ ಇವರು ವಾಸಿಸುವ ಮನೆ | ಶ್ರೀ ಅನಿಲ್ ಕುಮಾರ್ ಎಸ್ ಬೂಮರೆಡ್ಡಿ ಪೋಲಿಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಬಳ್ಳಾರಿ |
| 5 | ಬೆಳಗಾವಿ ಶಹರದ ಸಹ್ಯಾದ್ರಿ ನಗರದಲ್ಲಿರುವ ಶ್ರೀ ಅಜೀತ ಜಾಧವ್ ರವರ ಮನೆ ನಂ. 1036 ಮೊದಲನೇ ಮಹಡಿ | ಶ್ರೀ ಆರ್.ಕೆ. ಪಾಟೀಲ ಪೋಲಿಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಬೆಳಗಾವಿ |
| 6 | ಶ್ರೀ ದಯಾನಂದ ವಿಠೋಬಾ ದಳವಾಯಿ ಇವರ ಮನೆ ಪ್ಲಾಟ್ ನಂ. 158 ಸ್ಕೀಂ ನಂ 40 ಹನುಮಾನ ನಗರ ಬೆಳಗಾವಿ | ಶ್ರೀ ಎಸ್. ಎಂ. ವೇರ್ಣಿಕರ ಪೋಲಿಸ್ ಉಪಾಧೀಕ್ಷಕರು ಕರ್ನಾಟಕ ಲೋಕಾಯುಕ್ತ ಬೆಳಗಾವಿ |
| 7 | ಶ್ರೀ ಭೈರೋಜಿ ದೂದಪ್ಪಾ ಗುಗರೆಟ್ಟಿ ಸಾ: ಕಣಬರ್ಗಿ ಇವರ ಮನೆ | ಶ್ರೀ ಎಸ್. ಎಂ. ವೇರ್ಣಿಕರ ಪೋಲಿಸ್ ಉಪಾಧೀಕ್ಷಕರು ಕರ್ನಾಟಕ ಲೋಕಾಯುಕ್ತ ಬೆಳಗಾವಿ |
| 8 | ಶ್ರೀ ಮದನ ಕುಮಾರ್ ಇವರ ಕಾರ್ಯಾಲಯ ಬೆಳಗಾವಿ | ಶ್ರೀ ಬಾಲರಾಜು ಪೋಲಿಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ ಬಿಜಾಪುರ. |

ಸದರಿ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಅಧಿಕಾರಿ ಶ್ರೀ ಡಿ.ಬಿ. ನಾಯಕ್, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಇವರು ದಿನಾಂಕ 14–08–1981 ರಿಂದ ದಿನಾಂಕ : 09–09–2008 ರವರೆಗಿನ ಪರಿಶೀಲನಾ ಅವಧಿಯಲ್ಲಿ (chek period) ಒಟ್ಟು ರೂ. 91,27,409–00 ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತನ್ನ ಮತ್ತು ತನ್ನ ಕುಟುಂಬದ ಸದಸ್ಯರುಗಳಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 63,11,522/– ಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ " ಬಲ್ಲಮೂಲ" ಗಳಿಂದ ಗಳಿಸಿರುವ ಆದಾಯವು ರೂ. 75,73,463–00 ಗಳಾಗಿರುತ್ತದೆಂದು ಕಂಡು ಬಂದಿರುತ್ತದೆ. ಆಪಾದಿತರ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ. 1,54,38,931–00 ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ. 78,65,468–00 ಗಳಾಗಿರುತ್ತವೆ ಅಂದರೆ ಆಪಾದಿತ ಸರ್ಕಾರಿ ಅಧಿಕಾರಿ ಶೇಕಡ 103.85 ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮರ್ಥನೀಯ ನಿವರಣೆ ಅಥವಾ ಸಮರ್ಥನೀಯ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಡಿ.ಬಿ. ನಾಯಕ್, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1) (ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ಅಧಿಕಾರಿ ತಮ್ಮ "ಬಲ್ಲ ಮೂಲ" ಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಆಪರಾಧಿಕ ದುರ್ನಡತೆ ಎಸಗಿರುವುದರಿಂದ, ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅವಶ್ಯಕವೆಂದು ಅಭಿಪ್ರಾಯ ಪಡಲಾಗಿದೆ.

ಆಪಾದಿತರು ಲಂಚ ನಿರೋಧಕ ಕಾಯ್ದೆ1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪಾದಿತನನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರಿ ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988 ರ ಕಲಂ 19(1)(ಬಿ) ಅಡಿಯಲ್ಲಿ ಆಪಾದಿತ ಅಧಿಕಾರಿ ಶ್ರೀ ಡಿ.ಬಿ. ನಾಯಕ್ ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 68 ಕೆಇವಿ 08, ಬೆಂಗಳೂರು, ದಿನಾಂಕ : 18–03–2011**

ಆರೋಪಿಯಾದ ಶ್ರೀ ಡಿ.ಬಿ. ನಾಯಕ್, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಹಾಲಿ ಅಪರ ಪ್ರಾದೇಶಿಕ ಆಯುಕ್ತರು, (ಆಡಳಿತ ಮತ್ತು ಅಭಿವೃದ್ಧಿ) ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾ ವಿಭಾಗ ಗುಲ್ಬರ್ಗಾ ಇವರನ್ನು ಹುದ್ದೆಯಿಂದ ತೆಗೆದು ಹಾಕುವ / ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಡಿ.ಬಿ. ನಾಯಕ್, ಹಿಂದಿನ ಮುಖ್ಯ

ಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತ್ ಬೆಳಗಾಂ ಹಾಲಿ ಅಪರ ಪ್ರಾದೇಶಿಕ ಆಯುಕ್ತರು (ಆಡಳಿತ ಮತ್ತು ಅಭಿವೃದ್ಧಿ) ಪ್ರಾದೇಶಿಕ ಆಯುಕ್ತರ ಕಚೇರಿ, ಗುಲ್ಬರ್ಗಾ ವಿಭಾಗ ಗುಲ್ಬರ್ಗಾ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಈ ಮೇಲ್ಕಂಡ ಪರಿಷ್ಕೃತ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 18–03–11 ರಂದು ಹೊರಡಿಸಿದೆ.

ಈ ಸಂಬಂಧ ಹಿಂದೆ ಹೊರಡಿಸಲಾದ ಉಲ್ಲೇಖ (4) ರ ಸರ್ಕಾರಿ ಆದೇಶ ಸಂ: ಸಿಆಸುಇ 68 ಕೆಇವಿ 08 ದಿ: 07–02–2011 ರನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಎಂ.ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ

ಸಿಆಸುಇ (ಸೇವೆಗಳು)

ಪಿ.ಆರ್. 846

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದ ಪರಿಸ್ಕೃತ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಉಲ್ಲೇಖ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಎಂ–15/ಸಿಆರ್–2/2008 ಹಾಸನ ದಿ: 03–09–2010.
2. ತನಿಖಾಧಿಕಾರಿಯವರ ವರದಿ
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.
4. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ ಎಂ–15/ಸಿಆರ್–2/2008 ಹಾಸನ ದಿ: 04–01–2011.
5. ಸರ್ಕಾರಿ ಆದೇಶ ಸಂ: ಸಿಅಸುಇ 36 ಕೆಇವಿ 08 ದಿ: 20–12–10
6. ತಿದ್ದುಪಡಿ ಆದೇಶ ಸಂ: ಸಿಅಸುಇ 36 ಕೆಇವಿ2008 ದಿ: 24–01–2011.
7. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ ಎಂ–15/ಸಿಆರ್–2/2008 ಹಾಸನ ದಿ: 23–02–2011.

**ಪ್ರಸ್ತಾವನೆ :**

ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ಗುನ್ನೆ ಸಂಖ್ಯೆ: 02/2008 ರಲ್ಲಿ ಪೋಲಿಸ್ ನಿರೀಕ್ಷಕರು, ಹಾಸನ ವಿಭಾಗ, ಕರ್ನಾಟಕ ಲೋಕಾಯುಕ್ತ, ರವರು ಹಾಸನ ಲೋಕಾಯುಕ್ತ ಪೋಲಿಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ (ಉಲ್ಲೇಖ–2) ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–3) ಅಪರ ಪೋಲಿಸ್ ಮಹಾನಿರ್ದೇಶಕರು, ಪೋಲಿಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 03–09–10 (ಉಲ್ಲೇಖ–1 ರೊಡನೆ) ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988 ರ 19 (1)(ಬಿ) ಕಲಂನಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮ ಸಂ(5) ರ ದಿ: 20–12–10 ಆದೇಶದಲ್ಲಿ ಅಭಿಯೋಜನಾ ಮಂಜೂರಾತಿಯನ್ನು ಮತ್ತು ಮೇಲೆ ಓದಲಾದ ಕ್ರಮ ಸಂ(6) ರ ದಿ: 24–01–2011 ರಲ್ಲಿ ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿತ್ತು. ಪುನಃ ಅಪರ ಪೋಲಿಸ್ ಮಹಾ ನಿರ್ದೇಶಕರು, ಪೋಲಿಸ್ ವಿಭಾಗ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ ಓದಲಾದ ಉಲ್ಲೇಖ(6)ರ ಪತ್ರದಲ್ಲಿ ಮೂಲ ಆದೇಶದಲ್ಲಿ ಮತ್ತೆ ಕೆಲವು ನ್ಯೂನ್ಯತೆಗಳು ಕಂಡು ಬಂದಿದ್ದು, ಅವುಗಳನ್ನು ಸರಿಪಡಿಸಿ ಶೀಘ್ರವಾಗಿ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಕೋರಿದ್ದಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಅಪರ ಪೋಲಿಸ್ ಮಹಾ ನಿರ್ದೇಶಕರು, ಪೋಲಿಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ (ಉಲ್ಲೇಖ–1) ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)ಎಂ–15/ಸಿಆರ್–2/2008 ಹಾಸನ ದಿ: 03–09–2010 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಪ್ರಥಮ ವರ್ತಮಾನ ವರದಿ ದಿನಾಂಕ : 26–03–2008.

2) ಶೋಧನಾ ಪಂಚನಾಮೆಗಳು:

   1) ದಿನಾಂಕ: 27–03–2008 ರಂದು ಆಪಾದಿತರು ವಿದ್ಯಾನಗರ ಬಡಾವಣೆ ಹಾಸನ ದಲ್ಲಿ ವಾಸವಾಗಿದ್ದ ಮನೆಯ ಶೋಧನಾ ಪಂಚನಾಮೆ.

   2) ದಿನಾಂಕ : 28–03–2008 ರಂದು ಆಪಾದಿತರ ಅತ್ತೆ ಶ್ರೀಮತಿಲಕ್ಷ್ಮಿ ದೇವಮ್ಮ ರವರ ವಾಸದ ಮನೆ ಗೋಪಾಲಸ್ವಾಮಿ ವಠಾರದ ಶೋಧನಾ ಪಂಚನಾಮೆ.

   3) ದಿನಾಂಕ: 28–03–2008 ರಂದು ಆಪಾದಿತರ ಮಗ ಚೇತನ್ ಕುಮಾರ್ ರವರ ಹೆಸರಿನಲ್ಲಿದ್ದ ಲಾಕರ್ ನಂ. 4 ಎಸ್.ಬಿ.ಎಂ. ಹಾಸನದಲ್ಲಿ ನಡೆಸಿರುವ ಶೋಧನಾ ಪಂಚನಾಮೆ.

4) ದಿನಾಂಕ 27-03-2008 ರಂದು ಆಪಾದಿತರು ಕೆಲಸ ಮಾಡುವ ಜಿಲ್ಲಾಧಿಕಾರಿಗಳ ಕಟ್ಟಡದಲ್ಲಿರುವ ಕಛೇರಿಯ ಶೋಧನಾ ಪಂಚನಾಮೆ.
5) ದಿನಾಂಕ : 28-04-2008 ರಂದು ಆಪಾದಿತರ ಪತ್ನಿ ಶ್ರೀಮತಿ ಮಂಜುಳಾ ರವರು ಹಾಸನದ ಕೆನರಾ ಬ್ಯಾಂಕ್ ಶಾಖೆಯಲ್ಲಿ ಹೊಂದಿದ್ದ ಲಾಕರ್ ನಂ-77 ತೆರೆದು ಪರಿಶೀಲಿಸಿದ ಶೋಧನಾ ಪಂಚನಾಮೆ.

3) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ:
4) ತನಿಖಾಧಿಕಾರಿಯ ಅಂತಿಮ ವರದಿಗೆ ಅನುಬಂಧಿಸಿರುವ ಈ ಕೆಳಕಂಡ ಕಡತಗಳು:
1) ಕಡತ ಸಂಖ್ಯೆ 19-21-22- ಆಪಾದಿತರು ಹೊಂದಿದ್ದ ಆಸ್ತಿ ಮತ್ತು ದಾಯತ್ವಗಳ ಪಟ್ಟಿ, ಆದಾಯ ತೆರಿಗೆಯ ದಾಖಲಾತಿಗಳು ಹಾಗೂ ತನಿಖೆಯ ವಿವರಗಳು ಇತ್ಯಾದಿ ಇರುವ ಕಡತ.
2) ಕಡತ ಸಂಖ್ಯೆ-23 – ಆಪಾದಿತರು ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ದಾಖಲೆಗಳು ಇರುವ ಕಡತ.
3) ಕಡತ ಸಂಖ್ಯೆ-24- ಆಪಾದಿತರು ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ಖರ್ಚಿನ ವಿವರಗಳ ದಾಖಲೆಗಳು ಇರುವ ಕಡತ.
4) ಕಡತ ಸಂಖ್ಯೆ-25 ಆಪಾದಿತರವರ ಆಸ್ತಿ/ವೇತನದ ಆದಾಯ ಮತ್ತು ಅವರ ಕುಟುಂಬ ಸದಸ್ಯರು ಮತ್ತು ಬೇನಾಮಿ ವ್ಯಕ್ತಿಗಳ ಹೆಸರಿನಲ್ಲಿರುವ ಆಸ್ತಿಯ ಆದಾಯದ ದಾಖಲೆಗಳು ಇರುವ ಕಡತ.

ತನಿಖಾಧಿಕಾರಿ ಶ್ರೀ ಪಿ.ಎಲ್. ರುದ್ರಮುನಿ, ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಹಾಸನ ಇವರು ಶ್ರೀ ಕೆ.ಪಿ. ಹೊನಕೇರಿ ಕೆ.ಎಎಸ್ ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಹಾಸನ ಲೋಕಾಯುಕ್ತ ಪೋಲಿಸ್ ಠಾಣೆ ಗುನ್ನೆ ನಂ. 02/2008 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ ಈ ಕೆಳಕಾಣಿಸಿದಂತೆ ತನಿಖಾಧಿಕಾರಿಗಳು

1. ದಿನಾಂಕ : 27-03-2008 ಮತ್ತು 28-03-2008 ರಂದು ಆಪಾದಿತರು ವಾಸವಾಗಿರುವ ಹಾಸನದಲ್ಲಿನ ರವೀಂದ್ರನಗರ ಮತ್ತು ವಿದ್ಯಾನಗರ ಬಡಾವಣೆಯ ಮನೆ, ಹಾಸನದ ಉತ್ತರ ಬಡಾವಣೆಯಲ್ಲಿನ ಮನೆಯ ತನಿಖೆ ನಡೆಸಿರುತ್ತಾರೆ.
2. ದಿನಾಂಕ 28-03-2008 ರಂದು ಆಪಾದಿತರ ಅತ್ತೆ ಶ್ರೀಮತಿ ಲಕ್ಷ್ಮೀದೇವಮ್ಮ ರವರ ವಾಸದ ಮನೆಯ ತನಿಖೆ ನಡೆಸಿರುತ್ತಾರೆ.
3. ದಿನಾಂಕ : 27-03-2008 ರಂದು ಆಪಾದಿತರು ಕರ್ತವ್ಯ ನಿರ್ವಹಿಸುತ್ತಿದ್ದ ಹಾಸನ ಜಿಲ್ಲಾಧಿಕಾರಿಗಳ ಕಛೇರಿಯ ತನಿಖೆ ನಡೆಸಿರುತ್ತಾರೆ.
4. ದಿನಾಂಕ: 28-03-2008 ರಂದು ಆಪಾದಿತರ ಮಗ ಶ್ರೀ ಚೇತನ್‌ಕುಮಾರ್ ರವರ ಹೆಸರಿನಲ್ಲಿನ ಲಾಕರ್ ಅನ್ನು ತನಿಖೆ ಮಾಡಿರುತ್ತಾರೆ.
5. ದಿನಾಂಕ: 28-04-2008 ರಂದು ಆಪಾದಿತರ ಪತ್ನಿ ರವರು ಕೆನರಾ ಬ್ಯಾಂಕ್ ಹಾಸನದಲ್ಲಿ ಹೊಂದಿದ್ದ ಲಾಕರ್ ಅನ್ನು ತನಿಖೆ ನಡೆಸಿರುತ್ತಾರೆ.

ಮೇಲ್ಕಂಡ ಸ್ಥಳಗಳನ್ನು ದಿನಾಂಕ : 27-03-2008 ಮತ್ತು ದಿ: 28-03-08 ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧನೆ ನಡೆಸಿರುತ್ತಾರೆ. ಆ ಸಂದರ್ಭದಲ್ಲಿ ತಯಾರಿಸಲಾದ ಶೋಧನಾ ಪಂಚನಾಮೆಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ, ಬೆಳ್ಳಿ, ಬ್ಯಾಂಕ್ ಡಿಪಾಸಿಟ್‌ಗಳು, ವಾಹನಗಳು ಮತ್ತು ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಪತ್ತೆಯಾಗಿರುತ್ತವೆ.

ಸದರಿ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಅಧಿಕಾರಿ ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರು 1992 ರಿಂದ ದಿನಾಂಕ: 27-03-2008 ರವರೆಗಿನ ಪರಿಶೀಲನಾ ಅವಧಿಯಲ್ಲಿ (Check Period) ಒಟ್ಟು ರೂ. 1,30,13,264-00 ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತನ್ನ ಮತ್ತು ತನ್ನ ಕುಟುಂಬದ ಸದಸ್ಯರುಗಳಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 30,35,950-00 ಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ "ಬಲ್ಲ ಮೂಲ" ಗಳಿಂದ ಗಳಿಸಿರುವ ಆದಾಯವು ರೂ. 33,52,175-00 ಗಳಾಗಿರುತ್ತದೆಂದು ಕಂಡು ಬಂದಿರುತ್ತದೆ. ಆಪಾದಿತರ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ. 1,60,49,214-00 ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ. 1,26,97,039-00 ಗಳಾಗಿರುತ್ತವೆ. ಅಂದರೆ ಆಪಾದಿತ ಸರ್ಕಾರಿ ಅಧಿಕಾರಿ ಶೇಕಡ 378.77 ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮರ್ಥನೀಯ ವಿವರಣೆ ಅಥವಾ ಸಮರ್ಥನೀಯ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ಅಧಿಕಾರಿ ತಮ್ಮ "ಬಲ್ಲ ಮೂಲ" ಗಳ ಅದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ, ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅವಶ್ಯಕವೆಂದು ಅಭಿಪ್ರಾಯ ಪಡಲಾಗಿದೆ.

ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರ ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988 ಕಲಂ 19(1)(ಬಿ) ಅಡಿಯಲ್ಲಿ ಆಪಾದಿತ ಅಧಿಕಾರಿ ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 36 ಕೆಇವಿ 08, ಬೆಂಗಳೂರು, ದಿನಾಂಕ 18ನೇ ಮಾರ್ಚ್ 2011**

ಆರೋಪಿಯಾದ ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್ ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಹಾಲಿ ಅಪರ ಜಿಲ್ಲಾಧಿಕಾರಿ ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ, ಬಾಗಲಕೋಟೆ ಜಿಲ್ಲೆ ಬಾಗಲಕೋಟೆ ಇವರನ್ನು ಹುದ್ದೆಯಿಂದ ತೆಗೆದು ಹಾಕುವ/ ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಕೆ.ಪಿ. ಹೊನಕೇರಿ ಕೆ.ಎ.ಎಸ್. ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಹಾಸನ ಜಿಲ್ಲೆ ಹಾಲಿ ಅಪರ ಜಿಲ್ಲಾಧಿಕಾರಿ ಹಾಗೂ ಅಪರ ಜಿಲ್ಲಾ ದಂಡಾಧಿಕಾರಿ ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರನ್ವಯ ಈ ಮೇಲ್ಕಂಡ ಪರಿಷ್ಕೃತ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 18–03–11 ರಂದು ಹೊರಡಿಸಿದೆ.

ಈ ಸಂಬಂಧ ಹಿಂದೆ ಹೊರಡಿಸಲಾದ್ದ ಉಲ್ಲೇಖ (5) ಮತ್ತು (6) ರ ಸರ್ಕಾರಿ ಆದೇಶ ಸಂ: ಸಿಆಸುಇ 36 ಕೆಇವಿ 08 ದಿ: 20–12–2010 ಮತ್ತು ತಿದ್ದುಪಡಿ ಆದೇಶ ದಿನಾಮಕ 24–01–2011 ರನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ: ಎಂ.ಟಿ. ರೇಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಆಸುಇ (ಸೇವೆಗಳು)

ಪಿ.ಆರ್. 847

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಖಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 460 ಸಆಸೇ 2007, ದಿನಾಂಕ : 25–02–2008.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಿಶಾಸೇ 2008, ದಿನಾಂಕ : 23–**05–2008**.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಿಶಾಸೇ 2009, ದಿನಾಂಕ : 25–04–2009.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಸಆಸೇ 2010, ದಿನಾಂಕ : 17–09–2010.
5. ಆರ್ಥಿಕ ಇಲಾಖೆಯ ಕಡತ ಸಂಖ್ಯೆ ಆಇ 41 ಸಮಯ 2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿ ಒಂದು ಲೆಕ್ಕಾಧೀಕ್ಷಕರ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ಮತ್ತು (3) ರಲ್ಲಿ ಓದಲಾದ ಆದೇಶದಲ್ಲಿ ಆರ್ಥಿಕ ಇಲಾಖೆಯ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಾಧಿಕಾರಿ ಹುದ್ದೆಯನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನಾಗಿ ಉನ್ನತೀಕರಿಸಿ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿನ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯನ್ನು ದಿನಾಂಕ : 25–02–2009 ರಿಂದ 24–02–2011 ರವರಿಗೆ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯನ್ನು ದಿನಾಂಕ: 25–05–2010 ರಿಂದ 24–05–2011 ರವರಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು ಮೇಲೆ (5) ರಲ್ಲಿ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯಲ್ಲಿನ ಲೆಕ್ಕಪತ್ರ ನಿರ್ವಹಣೆ ಶಾಖೆಯ "ಲೆಕ್ಕಪರಿಶೋಧನಾಧಿಕಾರಿ" ಹುದ್ದೆಯನ್ನು ದಿನಾಂಕ 25–02–2011 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 163 ಸಆಸೇ 2011, ಬೆಂಗಳೂರು, ದಿನಾಂಕ 19ನೇ ಮಾರ್ಚ್ 2011**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಶಾಖೆಯಲ್ಲಿನ 'ಲೆಕ್ಕಪರಿಶೋಧನಾಧಿಕಾರಿ' ಹುದ್ದೆಯನ್ನು ದಿನಾಂಕ: 25–02–2011 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್. 848

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಗ್ರೂಫ್-ಎ ಹುದ್ದೆಗಳ ಸೃಜನೆ ಹಾಗೂ ಉನ್ನತೀಕರಣದ ಬಗ್ಗೆ.

**ಓದಲಾಗಿದೆ :** 1. ಕಡತ ಸಂಖ್ಯೆ ಸಿಆಸುಇ 02 ಅಕಅ2010.

**2.** ಆದೇಶ ಸಂಖ್ಯೆ ಸಿಆಸುಇ 458 ಸಅಸೇ 2008 ದಿನಾಂಕ 25-2-2011

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಅಧೀನ ಕಾರ್ಯದರ್ಶಿ, ಉಪ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ ಹುದ್ದೆಗಳಲ್ಲಿ ಅಧಿಕಾರಿಗಳು ದೀರ್ಘಾವಧಿ ಸೇವೆ ಸಲ್ಲಿಸಿದ್ದರೂ ಮುಂಬಡ್ತಿ ಪಡೆಯಲು ವಿಳಂಬವಾಗುತ್ತಿದೆಯೆಂದು ಹಾಗೂ ಸರ್ಕಾರದ ಹಲವು ಹೊಸ ವಿವಿಧ ನವೀನ ಕಾರ್ಯಕ್ರಮಗಳಿಂದಾಗಿ ಹಲವಾರು ಇಲಾಖೆಗಳಲ್ಲಿ ಕೆಲಸದ ಒತ್ತಡ ಹೆಚ್ಚಾಗಿದ್ದು, ಪರಿಣಾಮಕಾರಿಯಾಗಿ ನಿಗಧಿತ ಅವಧಿಯಲ್ಲಿ ಕರ್ತವ್ಯ ನಿರ್ವಹಿಸಲು ಕಷ್ಟ ಸಾಧ್ಯವಾಗಿರುತ್ತದೆ. ಆದ್ದರಿಂದ ಸಚಿವಾಲಯದ ಕಾರ್ಯದಕ್ಷತೆಯನ್ನು ಹೆಚ್ಚಿಸಲು ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವುದರಿಂದ ಕೆಲಸದಲ್ಲಿ ಗುಣಾತ್ಮಕ ಬದಲಾವಣೆಯನ್ನು ತರಲು ಹಾಗೂ ಜಟಿಲವಾದ ಸಮಸ್ಯೆಗಳಿಗೆ ಪರಿಹಾರ ಸಾಧ್ಯವಾಗುವುದು ಎಂಬ ಬಗ್ಗೆ ಕರ್ನಾಟಕ ಸರ್ಕಾರ ಸಚಿವಾಲಯದ ಪತ್ರಾಂಕಿತ ಅಧಿಕಾರಿಗಳ ಸಂಘದ ಮನವಿಯನ್ನು ಪರಿಶೀಲಿಸಿ, ಈ ಬಗ್ಗೆ ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು.ಇ. ಇವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಅಪರ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಉಪ ಕಾರ್ಯದರ್ಶಿ ಹಾಗೂ ಅಧೀನ ಕಾರ್ಯದರ್ಶಿಗಳ ಹುದ್ದೆಗಳನ್ನು ಸೃಜಿಸುವ ಬಗ್ಗೆ ಕಾರ್ಯಾಧ್ಯಯನ ನಡೆಸಿ ವರದಿ ನೀಡುವಂತೆ ಸಿ.ಆ.ಸು.ಇ. (ಆಡಳಿತ ಸುಧಾರಣಾ-ಕಾರ್ಯಾಧ್ಯಯನ) ವಿಭಾಗವನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಉಲ್ಲೇಖಿತ ಕಡತದಲ್ಲಿ ಸಿ.ಆಸು.ಇ. (ಆಡಳಿತ ಸುಧಾರಣಾ-ಕಾರ್ಯಾಧ್ಯಯನ) ವಿಭಾಗವು ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ವಿವಿಧ ಇಲಾಖೆಗಳಲ್ಲಿ ಕಾರ್ಯಾಧ್ಯಯನ ನಡೆಸಿ ಅಪರ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಉಪ ಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿ ವೃಂದಗಳಲ್ಲಿ ಒಟ್ಟು 17 ಹುದ್ದೆಗಳ ಸೃಜನೆ ಹಾಗೂ 6 ಹುದ್ದೆಗಳ ಉನ್ನತೀಕರಣ ಮತ್ತು ವಿವಿಧ ಕ್ಷೇತ್ರೀಯ ಇಲಾಖೆ/ನಿಗಮ/ಮಂಡಳಿ/ವೈದ್ಯಕೀಯ ಶಿಕ್ಷಣ ಕಾಲೇಜು ಮತ್ತು ಸರ್ಕಾರಿ ಆಸ್ಪತ್ರೆಗಳಲ್ಲಿನ 26 ಹುದ್ದೆಗಳನ್ನು ಸಚಿವಾಲಯದ ಉಪಕಾರ್ಯದರ್ಶಿ ಮತ್ತು ಅಧೀನ ಕಾರ್ಯದರ್ಶಿ ವೃಂದಕ್ಕೆ ಮೀಸಲಿಡಲು (Encadre) ಶಿಫಾರಸ್ಸು ಮಾಡಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೃಷಿ ಮತ್ತು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳಲ್ಲಿ ಹೊಸದಾಗಿ 2 ಜಂಟಿ ಕಾರ್ಯದರ್ಶಿ ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಕಂದಾಯ/ ಕಾರ್ಮಿಕ ಮತ್ತು ಶಿಕ್ಷಣ ಇಲಾಖೆಗಳಲ್ಲಿನ 3 ಉಪಕಾರ್ಯದರ್ಶಿ ಹುದ್ದೆಗಳನ್ನು ಜಂಟಿ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸಲಾಗಿದೆ. ಸಿ.ಆಸು.ಇ (ಆಡಳಿತ ಸುಧಾರಣಾ ವಿಭಾಗದ) ಕಾರ್ಯಾಧ್ಯಯನ ವರದಿಯಲ್ಲಿನ ಶಿಫಾರಸ್ಸಿನನ್ವಯ ಉಳಿದ ಹುದ್ದೆಗಳ ಸೃಜನೆ/ ಉನ್ನತೀಕರಣದ ಬಗ್ಗೆ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿ ನಿರ್ಣಯ ಕೈಗೊಳ್ಳಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 458 ಸಅಸೇ 2008, ಬೆಂಗಳೂರು, ದಿನಾಂಕ 22ನೇ ಮಾರ್ಚ್ 2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಸರ್ಕಾರ ಸಚಿವಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಇಲಾಖೆಗಳಲ್ಲಿ ಅಪರ ಕಾರ್ಯದರ್ಶಿ/ ಉಪಕಾರ್ಯದರ್ಶಿ ಅಧೀನ ಕಾರ್ಯದರ್ಶಿ ಹುದ್ದೆಗಳನ್ನು ಸೃಜಿಸಲಾಗಿದೆ.

| | |
|---|---|
| **ಅಪರ ಕಾರ್ಯದರ್ಶಿ ಹುದ್ದೆ** | |
| 1) | ಸಿ.ಆ.ಸು.ಇ. (ಸಿಬ್ಬಂದಿ) |
| **ಉಪಕಾರ್ಯದರ್ಶಿ ಹುದ್ದೆ** | |
| 1) | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ |
| 2) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ |
| 3) | ಒಳಾಡಳಿತ ಇಲಾಖೆ |
| 4) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ |
| 5) | ನಗರಾಭಿವೃದ್ಧಿ ಇಲಾಖೆ |
| 6) | ಕಾನೂನು,ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ |
| **ಅಧೀನ ಕಾರ್ಯದರ್ಶಿ** | |
| 1) | ಶಿಕ್ಷಣ ಇಲಾಖೆ -2 ಹುದ್ದೆಗಳು |
| 2) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) |
| 3) | ಒಳಾಡಳಿತ ಇಲಾಖೆ |
| 4) | ನಗರಾಭಿವೃದ್ಧಿ ಇಲಾಖೆ |
| 5) | ಸಹಕಾರ ಇಲಾಖೆ |
| 6) | ರಾಜ್ಯ ಚುನಾವಣಾ ಆಯೋಗ |

ಈ ಕೆಳಕಂಡ ಹುದ್ದೆಗಳನ್ನು ಅಧೀನ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸಿ ಹಾಗೂ ಈ ಹುದ್ದೆಗಳನ್ನು ಅಧೀನ ಕಾರ್ಯದರ್ಶಿ ವೃಂದದ ಅಧಿಕಾರಿಗಳಿಂದ ಭರ್ತಿ ಮಾಡಲು ಆದೇಶಿಸಲಾಗಿದೆ.

| | |
|---|---|
| 1) | ಸಹಾಯಕ ನಿರ್ದೇಶಕರು<br>ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು |
| 2) | ಆಡಳಿತಾಧಿಕಾರಿ, ರಾಜ್ಯ ಪತ್ರಾಗಾರ ಇಲಾಖೆ |

ಮೇಲ್ಕಂಡಂತೆ ಹೊಸದಾಗಿ ಸೃಜಿಸಲಾದ ಹಾಗೂ ಉನ್ನತೀಕರಿಸಲಾದ ಹುದ್ದೆಗಳಿಗೆ ಮತ್ತು ದಿನಾಂಕ 25–02–2011 ರ ಆದೇಶದಲ್ಲಿ ಸೃಜಿಸಲಾದ / ಉನ್ನತೀಕರಿಸಲಾದ ಜಂಟಿ ಕಾರ್ಯದರ್ಶಿಗಳ ಹುದ್ದೆಗಳಿಗೆ ಕಾರ್ಯ ಹಂಚಿಕೆಯನ್ನು ಸಂಬಂಧಪಟ್ಟ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು ಹಂಚಿಕೆ ಮಾಡತಕ್ಕದ್ದು.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ136 : ವೆಚ್ಚ –12 : 2011 ದಿನಾಂಕ 14–02–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 849 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರಲ್ಲಿ ನಡೆದಿದೆ ಎನ್ನಲಾದ ವ್ಯವಹಾರಗಳ ಬಗ್ಗೆ ಪ್ರಕರಣ 64ರ ಅಡಿ ವಿಚಾರಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ನಿಬಂಧಕರ ಪತ್ರದ ಸಂಖ್ಯೆ: ಯುಬಿಸಿ/ಯುಎಂಸಿ/–4/74/ಯುಎಂಸಿ/2006–07, ದಿ: 24–12–2010.

**2.** ಸರ್ಕಾರದ ಆದೇಶ ಸಂಖ್ಯೆ: ಸಇ 128 ಸಸಂನೋ2010, ದಿನಾಂಕ : 25–**01–2011**

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಆದೇಶದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ವಿಚಾರಣಾ ಅವಧಿಯನ್ನು ದಿನಾಂಕ : 31–12–2010 ರವರೆಗೆ ವಿಸ್ತರಿಸಲಾಗಿದೆ. ಓದಲಾದ (1)ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸದರಿ ಸಂಘದ ಹಿಂದಿನ ನಿರ್ದೇಶಕರುಗಳಾದ ಶ್ರೀ ಚಂಪಕಧಾಮಸ್ವಾಮಿ ಮತ್ತು ಇತರರು ಪ್ರಕರಣ 64ರ ವಿಚಾರಣೆಯನ್ನು ಸ್ಥಗಿತಗೊಳಿಸಲು ಅರ್ಜಿ ಸಲ್ಲಿಸಿದ್ದನ್ನು ಇತ್ಯರ್ಥಪಡಿಸಿ ವಿಚಾರಣೆಯನ್ನು ಮುಂದುವರೆಸಲು ಆದೇಶಿಸಲಾಗಿದೆ. ಆದುದರಿಂದ, ಪ್ರಕರಣ 64ರ ವಿಚಾರಣೆಗೆ ತಡೆಯುಂಟಾಗಿ ವಿಚಾರಣೆಯನ್ನು ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ ಆದುದರಿಂದ, ವಿಚಾರಣಾ ಅವಧಿಯನ್ನು ದಿನಾಂಕ : 28–02–2011 ರವರೆಗೆ ವಿಸ್ತರಿಸಲು ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 25 ಸಿಎಲ್ಎಂ 2011, ದಿನಾಂಕ 09–03–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಪ್ರಕರಣ 64ರ ಅಡಿ ಆದೇಶಿಸಿರುವ ವಿಚಾರಣೆಯ ಅವಧಿಯನ್ನು ದಿನಾಂಕ : 01–01–2011 ರಿಂದ 31–03–2011 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 64(2–ಎ) ಗೆ ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನೌಕರರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:–

**31ರ ಪ್ರಕರಣದಲ್ಲಿ**

1. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64 ಉಪಪ್ರಕರಣ (2–ಎ) ರಲ್ಲಿನ **"**ಆರು ತಿಂಗಳು**"** ಎಂಬ ಪದಗಳಿಗೆ ಬದಲಾಗಿ **"**ಹದಿನಾಲ್ಕು ತಿಂಗಳು**"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.
2. ವಿಚಾರಣಾಧಿಕಾರಿಗಳು ವೈಯಕ್ತಿಕ ಜವಾಬ್ದಾರಿಯ ಮೇಲೆ ದಿನಾಂಕ: 31–03–2011 ರೊಳಗೆ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.

**ಸೂಚನೆ:**

ಪ್ರಕರಣ 64 ಉಪ–ಪ್ರಕರಣ (2–ಎ) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 31–03–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64 ಉಪ–ಪ್ರಕರಣ (2–ಎ) ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 850 ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ದಾವಣಗೆರೆ ಜಿಲ್ಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿ, ದಾವಣಗೆರೆ ಇವರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/901/2011, ದಿನಾಂಕ: 22–02–2011.

**ಪ್ರಸ್ತಾವನೆ :**

ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ದಾವಣಗೆರೆ ಜಿಲ್ಲೆಯ, ಹರಪನಹಳ್ಳಿ ತಾಲ್ಲೂಕಿನಲ್ಲಿ ಆಸರೆ ಯೋಜನೆಯಡಿ ದಾನಿಗಳು ನಿರ್ಮಿಸದೇ ಬಾಕಿ ಉಳಿದಿರುವ 172ಮನೆಗಳ ನಿರ್ಮಾಣ ಕಾಮಗಾರಿಯನ್ನು ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹರಪನಹಳ್ಳಿ ಇವರಿಗೆ ವಹಿಸುವಂತೆ ಹಾಗೂ ಈ ಕಾಮಗಾರಿಗಳನ್ನು ಪೂರ್ಣಗೊಳಿಸಲು ರೂ. 223.60 ಲಕ್ಷಗಳನ್ನು ದಾವಣಗೆರೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಯವರು ಅನುಮೋದನೆ ನೀಡಿರುತ್ತಾರೆ. ಆದುದರಿಂದ ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 174 ಟಿಎನ್ಆರ್ 2010, ಬೆಂಗಳೂರು, ದಿನಾಂಕ 14–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ, ಆಸರೆ ಮನೆಗಳನ್ನು ನಿರ್ಮಿಸಲು 172 ಮನೆಗಳನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರಿಗೆ ರೂ. 223.60 ಲಕ್ಷಗಳನ್ನು (ರೂಪಾಯಿ ಇನ್ನೂರ ಇಪ್ಪತ್ತಾಮೂರು ಮತ್ತು ಅರವತ್ತು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ 8235–00–111–0–02 "Public Contributions to Calamity Relief" ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಅನುದಾನ ವೆಚ್ಚ ಮಾಡಿದ್ದಕ್ಕೆ, ಸಂಬಂಧಪಟ್ಟ ಅಧಿಕಾರಿಗಳು ಹಣಬಳಿಕೆ ಪ್ರಮಾಣ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸುವುದು ಹಾಗೂ ಕಾಮಗಾರಿಗಳ ಬಗ್ಗೆ ಭೌತಿಕ ಹಾಗೂ ಆರ್ಥಿಕ ಪ್ರಗತಿಯನ್ನು ಸಹ ಸರ್ಕಾರಕ್ಕೆ ಸಲ್ಲಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ಅನುದಾನ ಬಿಲ್ಲನ್ನು ತಯಾರಿಸಿ ಮೇಲು ರುಜು ಮಾಡಿ ದಾವಣಗೆರೆ ಜಿಲ್ಲಾ ಖಜಾನೆಗಳಿಂದ ಡ್ರಾ ಮಾಡಿಕೊಳ್ಳಲು ಆದೇಶಿಸಿದೆ.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿಯೇ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.

ಈ ಆದೇಶವನ್ನು ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ. ಗಂಗಾಧರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿ.ನಿ. ಮತ್ತು ಸೇವೆಗಳು –2)

ಪಿ.ಆರ್. 851

ಶಿಕ್ಷಣ ಸಚಿವಾಲಯ

ಸುತ್ತೋಲೆ

ಸಂಖ್ಯೆ: ಇಡಿ 20 ಪಿಟಿಐ 2011, ಬೆಂಗಳೂರು, ದಿನಾಂಕ: 16–03–2011

ಡಿ.ಎಸ್.ಇ.ಆರ್.ಟಿ. ನಿರ್ದೇಶಕರ ಸುತ್ತೋಲೆಯ ಶೈಕ್ಷಣಿಕ ವೇಳಾಪಟ್ಟಿಯಂತೆ ಆಡಳಿತ ಮಂಡಳಿ ಕೋಟಾದಡಿ ವಿದ್ಯಾರ್ಥಿಗಳನ್ನು ದಾಖಲಾತಿ ಮಾಡಿಕೊಂಡು ಸಂಬಂಧಿಸಿದ ಡಯಟ್‌ಗಳಿಗೆ ನಿಗದಿತ ಅವಧಿಯೊಳಗೆ ಪ್ರಸ್ತಾವನೆಯನ್ನು ಸಲ್ಲಿಸುವುದು ಆಯಾ ಡಿ.ಎಡ್., ಕಾಲೇಜುಗಳ ಆಡಳಿತ ಮಂಡಳಿಯ ಕರ್ತವ್ಯವಾಗಿದೆ. ಆಡಳಿತ ಮಂಡಳಿಗಳು ಅವರ ಕೋಟಾದಡಿ ವಿಳಂಬವಾಗಿ ದಾಖಲಾತಿ ಮಾಡಿಕೊಂಡಿರುವ ವಿದ್ಯಾರ್ಥಿಗಳ ದಾಖಲಾತಿಯನ್ನು ಅನುಮೋದಿಸುವಂತೆ ಕೋರುತ್ತಿರುವುದು ಸರಿಯಾದ ಕ್ರಮವಲ್ಲ, ಇಂತಹ ಪ್ರಸ್ತಾಪಗಳನ್ನು ಈ ಮೊದಲು ದಂಡ ವಿಧಿಸಿ ಅನುಮೋದಿಸಲಾಗಿದೆ.

ಈ ಹಿಂದಿನ ಸಾಲುಗಳಲ್ಲಿ ವಿಳಂಬ ವಿನಾಯಿತಿಯನ್ನು ಒಂದು ಬಾರಿಗೆ ಮಾತ್ರ ಎಂದು ಸೂಚಿಸಲಾಗಿದ್ದರೂ ಸಹ ಇಂತಹ ಪ್ರಕರಣಗಳು ಮರುಕಳಿಸುತ್ತಿರುವುದು ವಿಷಾದನೀಯ ಆದುದರಿಂದ ಇನ್ನು ಮುಂದೆ ಆಡಳಿತ ಮಂಡಳಿಗಳು ಈ ರೀತಿ ವಿಳಂಬ ವಿನಾಯಿತಿಗೆ ಮನವಿ ಸಲ್ಲಿಸಿದ್ದಲ್ಲಿ ಅಂತವರ ಸಂಸ್ಥೆಯ ನೋಂದಣಿಯನ್ನು ರದ್ದುಗೊಳಿಸಲಾಗುವುದೆಂದು ಈ ಮೂಲಕ ಎಲ್ಲಾ ಡಿ.ಎಡ್., ಸಂಸ್ಥೆಗಳ ಆಡಳಿತ ಮಂಡಳಿಗಳಿಗೆ ಎಚ್ಚರಿಕೆ ನೀಡಲಾಗಿದೆ.

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

ಪಿ.ಆರ್. ನಂ. 852

## ಕಾರ್ಮಿಕ ಸಚಿವಾಲಯ

**ವಿಷಯ :** ಜುಲೈ 2011ರ ಅಖಿಲ ಭಾರತ ವೃತ್ತಿ ಪರೀಕ್ಷೆಗೆ ಸಂಯೋಜನೆ ಹೊಂದಿಲ್ಲದ ವೃತ್ತಿ/ಘಟಕಗಳಲ್ಲಿ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳು ಪರೀಕ್ಷೆಗೆ ಹಾಜರಾಗುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತಇ/ತ/ಸಂ–1/ವಿವ–23/2009–10, ದಿನಾಂಕ: 24/03/2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ತಮ್ಮ ಪತ್ರದಲ್ಲಿ ಜುಲೈ 2010 ವೃತ್ತಿ ಪರೀಕ್ಷೆಗೆ ಸಂಯೋಜನೆ ಹೊಂದಿಲ್ಲದ ವೃತ್ತಿ/ಘಟಕಗಳ ಅಭ್ಯರ್ಥಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಕಾಇ 97 ಇಟಿಐ 2010, ದಿನಾಂಕ: 17/04/2010 ರಲ್ಲಿ ಇದೊಂದು ಬಾರಿಗೆ ಮಾತ್ರ ಪ್ರತಿ ಸಂಯೋಜನಾ ರಹಿತ ಘಟಕಕ್ಕೆ ರೂ.10,000/– ದಂಡ ವಿಧಿಸಿ ಪರೀಕ್ಷೆಗೆ ಅನುಮತಿಸಲಾಗಿದೆ ಎಂದೂ, ಆದರೆ ಅದೇ ಆದೇಶದಲ್ಲಿ "ಈಗಾಗಲೇ 2009ರಲ್ಲಿ ಸಂಯೋಜನಾ ರಹಿತವಾಗಿ ಪ್ರವೇಶ ಮಾಡಿಕೊಂಡಿದ್ದು, ಮೊದಲನೇ ವರ್ಷದಲ್ಲಿ ತರಬೇತಿ ಪಡೆಯುತ್ತಿರುವ ತರಬೇತಿದಾರರ ಪಟ್ಟಿಯನ್ನು ಜುಲೈ 2010ರ ದಂಡ ಶುಲ್ಕ ಪರೀಕ್ಷಾ ಅರ್ಜಿಯೊಂದಿಗೆ ತಪ್ಪದೆ ಆಯಾ ವಿಭಾಗೀಯ ಕಛೇರಿಗೆ ಸಲ್ಲಿಸಲು ಸೂಚಿಸಲಾಗಿದೆ ಎಂದು ತಿಳಿಸಿರುವರು. ಈ ಹಿನ್ನೆಲೆಯಲ್ಲಿ ಈಗಾಗಲೇ ಅಂದರೆ 2009ರಲ್ಲಿ ಸಂಯೋಜನಾ ರಹಿತವಾಗಿ ಪ್ರವೇಶ ಮಾಡಿಕೊಂಡಿದ್ದು, 2010ರಲ್ಲೇ ತರಬೇತಿದಾರರ ಪಟ್ಟಿಯನ್ನು ಆಯಾ ವಿಭಾಗೀಯ ಕಛೇರಿಗಳಿಗೆ ಸಲ್ಲಿಸಿರುವ ಸಂಯೋಜನೆ ಹೊಂದಿಲ್ಲದ ವೃತ್ತಿ/ಘಟಕಗಳ ಅಭ್ಯರ್ಥಿಗಳನ್ನು ಜುಲೈ 2011ರ ವೃತ್ತಿ ಪರೀಕ್ಷೆಗೆ ದಂಡ ಶುಲ್ಕ ತುಂಬಿಸಿಕೊಂಡು ಅನುಮತಿಸಬಹುದಾಗಿದೆ ಎಂದು ತಿಳಿಸುತ್ತಾ, ಈ ಹಿನ್ನೆಲೆಯಲ್ಲಿ ಜುಲೈ 2011ರ ವೃತ್ತಿ ಪರೀಕ್ಷೆಗೆ 2009ರಲ್ಲೇ ಸಂಯೋಜನಾ ರಹಿತವಾಗಿ ಪ್ರವೇಶ ಮಾಡಿಕೊಂಡಿರುವ ವೃತ್ತಿ/ಘಟಕಗಳ ಅಭ್ಯರ್ಥಿಗಳ ಪ್ರತಿ ಘಟಕಕ್ಕೆ ರೂ. 10,000/– ದಂಡ ವಿಧಿಸಿ ಅನುಮತಿಸಬಹುದಾಗಿದೆ ಹಾಗೂ ಈ ರೀತಿ ದಂಡ ವಿಧಿಸಿ ಪರೀಕ್ಷೆಗೆ ಅನುಮತಿಸುವುದು ಇದೇ ಕೊನೆಯಬಾರಿಯಾಗಿರುತ್ತದೆ ಎಂದು ತಿಳಿಸಿರುವರು. ಜುಲೈ 2011ರ ವೃತಿ ಪರೀಕ್ಷೆಗೆ ದಿನಾಂಕ: 21/03/2011 ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿದ್ದು, ಇದೊಂದು ಬಾರಿಗೆ ಸಂಯೋಜನಾ ರಹಿತ ವೃತ್ತಿ/ಘಟಕಗಳ ಅಭ್ಯರ್ಥಿಗಳನ್ನು ವೃತ್ತಿ ಪರೀಕ್ಷೆಗೆ ಅನುಮತಿಸುವ ಬಗ್ಗೆ ಸರ್ಕಾರದ ಆದೇಶ ನಿರೀಕ್ಷಿಸಿ ಅಧಿಸೂಚನೆ ಸಂಖ್ಯೆ: ಉತಇ/ತ/ವೃಪವಿ/ಕುತಯೋ–1/ವಿವ–27/2010–11, ದಿನಾಂಕ: 07/02/2011ನ್ನು ಹೊರಡಿಸಿದ್ದು, ಸದರಿ ಅಧಿಸೂಚನೆಯನ್ನು ಸ್ಥಿರೀಕರಿಸಿ ಮಂಜೂರಾತಿ ಆದೇಶ ನೀಡಲು ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 62 ಇಟಿಐ 2011 ಬೆಂಗಳೂರು, ದಿನಾಂಕ: 30/03/2011**

ಜುಲೈ 2011ರ ವೃತ್ತಿ ಪರೀಕ್ಷೆಗೆ 2009ರಲ್ಲೇ ಸಂಯೋಜನಾ ರಹಿತವಾಗಿ ಪ್ರವೇಶ ಮಾಡಿಕೊಂಡಿರುವ ವೃತ್ತಿ/ಘಟಕಗಳಿಗೆ ದಂಡ ವಿಧಿಸಿ ಅನುಮತಿಸಿ ಆಯುಕ್ತರು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಉತಇ/ತ/ವೃಪವಿ/ಕುತಯೋ–1/ವಿವ–27/2010–11, ದಿನಾಂಕ: 07/02/2011ನ್ನು ಸ್ಥಿರೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಮಹಿಬೂಬಸಾಬ
ಪೀಠಾಧಿಕಾರಿ, ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

ಪಿ.ಆರ್. 1001

## ಕಾರ್ಮಿಕ ಸಚಿವಾಲಯ

**ವಿಷಯ :** ಆಗಸ್ಟ್ 2009ರ ಪ್ರವೇಶ ಪಟ್ಟಿ ಅನುಮೋದಿಸುವಲ್ಲಿನ ವಿಳಂಬಕ್ಕೆ ದಂಡ ವಿಧಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತಇ/ತ/ಸಂ–1/ವಿವ–23/2009–10, ದಿನಾಂಕ: 24/03/2011.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ತಮ್ಮ ಪತ್ರದಲ್ಲಿ ಡಿಜಿಇಟಿ ನಿಯಮಾನುಸಾರ ವಿದ್ಯಾರ್ಥಿಗಳನ್ನು ಪ್ರತಿ ವರ್ಷ ಜುಲೈ–ಆಗಸ್ಟ್ ತಿಂಗಳಲ್ಲಿ ಪ್ರವೇಶ ಮಾಡಿಕೊಳ್ಳಬೇಕಾಗಿದ್ದು, ಈ ರೀತಿ ಪ್ರವೇಶ ಮಾಡಿಕೊಳ್ಳಲಾದ ವಿದ್ಯಾರ್ಥಿಗಳ ಪಟ್ಟಿ ಸಿದ್ದಪಡಿಸಿ, ಆಯಾ ವಿಭಾಗಗಳಿಗೆ ಪ್ರತಿ ಸಂಸ್ಥೆಗಳು ಸಲ್ಲಿಸಿ ಅನುಮೋದನೆ ಪಡೆದುಕೊಳ್ಳಬೇಕಾಗಿರುತ್ತದೆ ಎಂದೂ, ಡಿಜಿಇಟಿಯು ಇನ್ನು ಮುಂದೆ ಪ್ರತಿ ವಿದ್ಯಾರ್ಥಿಯ ಪ್ರವೇಶದ ವಿವರಗಳನ್ನು ತಂತ್ರಾಂಶದ ಮುಖಾಂತರ ಪರೀಕ್ಷೆ ನಡೆಸುವುದರಿಂದ ಪ್ರಮಾಣಪತ್ರ ನೀಡುವವರೆಗೆ ನಿಗಾವಹಿಸುವ ಬಗ್ಗೆ ಕ್ರಮ ತೆಗೆದುಕೊಂಡಿರುತ್ತದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಆಗಸ್ಟ್ 2009ರ ಶೈಕ್ಷಣಿಕ ಸಾಲಿನಲ್ಲಿ ಪ್ರವೇಶ ಮಾಡಿಕೊಂಡು ಒಂದು ವರ್ಷ ಕಳೆದರೂ ವಿದ್ಯಾರ್ಥಿಗಳ ಪಟ್ಟಿ ಅನುಮೋದನೆಗೆ ಸಲ್ಲಿಸದೇ ಇರುವುದು ಆ ಸಂಸ್ಥೆಗಳ ಕರ್ತವ್ಯ ಲೋಪವಾಗಿದ್ದು, ಇಂತಹ ಪ್ರವೃತ್ತಿಯನ್ನು ತಪ್ಪಿಸಲು ಆಗಸ್ಟ್ 2009ರಲ್ಲಿ ಪ್ರವೇಶ ಮಾಡಿಕೊಂಡು ದಿನಾಂಕ: 31/01/2010 ರವರೆಗೆ ಅನುಮೋದನೆಗೆ ಪ್ರವೇಶ ಪಟ್ಟಿ ಸಲ್ಲಿಸದೇ ಇರುವ ಸಂಯೋಜನೆ ಹೊಂದಿರುವ ಪ್ರತಿ ವೃತ್ತಿ/ಘಟಕಕ್ಕೆ ರೂ.5,000/– ದಂಡ ವಿಧಿಸಿ, ತದನಂತರ ಅಂದರೆ ದಿನಾಂಕ: 30/04/2010ರ ನಂತರವು ಪ್ರವೇಶ ಪಟ್ಟಿ ಅನುಮೋದನೆಗೆ ಸಲ್ಲಿಸದಿದ್ದಲ್ಲಿ ಮುಂದಿನ ಒಂದು ತಿಂಗಳಿಗೆ ಅಂದರೆ 01/05/2010 ರಿಂದ 31/05/2010 ರವರೆಗೆ ಪ್ರತಿ ದಿನಕ್ಕೆ ರೂ. 500/– ದಂಡ ವಿಧಿಸಲು ಸುತ್ತೋಲೆ ದಿನಾಂಕ: 15/04/2010ರಲ್ಲಿ ತಿಳಿಸಲಾಗಿತ್ತು ಎನ್ನುವುದಾಗಿ ಆಯುಕ್ತರು ತಿಳಿಸಿರುತ್ತಾರೆ.

ಆದರೂ ಸಹ ಕೆಲವು ಐಟಿಸಿಗಳು ವಿದ್ಯಾರ್ಥಿಗಳ ಪಟ್ಟಿಯನ್ನು ಅನುಮೋದನೆಗಾಗಿ ಈಗ ಸಲ್ಲಿಸುತ್ತಿದ್ದು, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಅನುಮೋದನೆ ನೀಡಲು ಒತ್ತಾಯಿಸುತ್ತಿದ್ದಾರೆ ಎಂದೂ ಈ ಹಿನ್ನೆಲೆಯಲ್ಲಿ ಖಾಸಗಿ ಸಂಸ್ಥೆಗಳು ಸಂಯೋಜನೆ ಹೊಂದಿರುವ ಪ್ರತಿ ವೃತ್ತಿ/ಘಟಕಗಳ ಆಗಸ್ಟ್ 2009ರ ಪ್ರವೇಶಪಟ್ಟಿ ಅನುಮೋದನೆ ಬಗ್ಗೆ ಈ ಕೆಳಗಿನಂತೆ, ಅಂದರೆ ಈಗಾಗಲೇ ನಿರ್ದೇಶನಾಲಯದ ವತಿಯಿಂದ ಕ್ರಮ ತೆಗೆದುಕೊಂಡಿದ್ದು

ಈ ಕೆಳಗಿನ ಅಂಶ (ಅ) ದ ಬಗ್ಗೆ ಸ್ಥಿರೀಕರಿಸಿ ಘಟನೋತ್ತರ ಮಂಜೂರಾತಿ ನೀಡಲು ಹಾಗೂ ಅಂಶ (ಆ) ಮತ್ತು (ಇ) ಬಗ್ಗೆ ಸರ್ಕಾರದ ಆದೇಶ ನೀಡಲು ಕೋರಲಾಗಿದೆ ಎಂದು ತಿಳಿಸಿರುವರು.

(ಅ) ಪ್ರವೇಶ ಮಾಡಿಕೊಂಡ ದಿನಾಂಕದಿಂದ 30/04/2010 ರವರೆಗೆ ವಿದ್ಯಾರ್ಥಿಗಳ ಪಟ್ಟಿ ಸಲ್ಲಿಸಿದ್ದಲ್ಲಿ ರೂ. 5000/- ಪ್ರತಿ ಘಟಕಕ್ಕೆ.

(ಆ) ಪ್ರವೇಶ ಮಾಡಿಕೊಂಡ ದಿನಾಂಕದಿಂದ 31/03/2011ರವರೆಗೆ ವಿದ್ಯಾರ್ಥಿಗಳ ಪ್ರವೇಶಪಟ್ಟಿಯನ್ನು ಅನುಮೋದನೆಗೆ ಸಲ್ಲಿಸಿದ್ದಲ್ಲಿ ರೂ. 10000/- ದಂತೆ ಪ್ರತಿ ಘಟಕಕ್ಕೆ ದಂಡ ಶುಲ್ಕ ಪಾವತಿಸುವುದು.

(ಇ) ಆ ನಂತರ ಅಂದರೆ ದಿನಾಂಕ: 01/04/2011 ರಿಂದ 30/04/2011 ರವರೆಗೆ ಆಗಸ್ಟ್ 2009ರ ವಿದ್ಯಾರ್ಥಿಗಳ ಪ್ರವೇಶ ಪಟ್ಟಿಯನ್ನು ಅನುಮೋದನೆಗೆ ಸಲ್ಲಿಸದಿರುವ ಸಂಯೋಜನೆ ಹೊಂದಿರುವ ಪ್ರತಿ ಘಟಕಕ್ಕೆ ರೂ.10,000/-ದ ಜೊತೆಗೆ ದಿನ ಒಂದಕ್ಕೆ ರೂ.500/-ರ ರಂತೆ ದಂಡ ಶುಲ್ಕ ಪಾವತಿಸುವುದು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 63 ಇಟಿಐ 2011 ಬೆಂಗಳೂರು, ದಿನಾಂಕ 30/03/2011**

ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಸಂಯೋಜನೆ ಹೊಂದಿರುವ ಪ್ರತಿ ವೃತ್ತಿ/ಘಟಕಗಳ ಆಗಸ್ಟ್ 2009ರ ಪ್ರವೇಶಪಟ್ಟಿ ಅನುಮೋದನೆಯ ಬಗ್ಗೆ ವಿಳಂಬಕ್ಕೆ ಈ ಕೆಳಗಿನಂತೆ ದಂಡನೆ ವಿಧಿಸಲು ಮಂಜೂರಾತಿ ನೀಡಲಾಗಿದೆ.

(ಅ) ಪ್ರವೇಶ ಮಾಡಿಕೊಂಡ ದಿನಾಂಕದಿಂದ 30/04/2010 ರವರೆಗೆ ವಿದ್ಯಾರ್ಥಿಗಳ ಪಟ್ಟಿ ಸಲ್ಲಿಸಿದ್ದಲ್ಲಿ ರೂ.5000/- ಪ್ರತಿ ಘಟಕಕ್ಕೆ ಆಯುಕ್ತರು ದಂಡನೆ ವಿಧಿಸಿದ್ದನ್ನು ಸ್ಥಿರೀಕರಿಸಿ ಘಟನೋತ್ತರ ಮಂಜೂರಾತಿ ನೀಡಲಾಗಿದೆ.

(ಆ) ಪ್ರವೇಶ ಮಾಡಿಕೊಂಡ ದಿನಾಂಕದಿಂದ 31/03/2011 ರವರೆಗೆ ವಿದ್ಯಾರ್ಥಿಗಳ ಪ್ರವೇಶಪಟ್ಟಿಯನ್ನು ಅನುಮೋದನೆಗೆ ಸಲ್ಲಿಸಿದ್ದಲ್ಲಿ ರೂ. 10,000/- ದಂತೆ ಪ್ರತಿ ಘಟಕಕ್ಕೆ ದಂಡ ಶುಲ್ಕ ಪಾವತಿಸತಕ್ಕದ್ದು.

(ಇ) ಆ ನಂತರ ಅಂದರೆ ದಿನಾಂಕ: 01/04/2011 ರಿಂದ 30/04/2011 ರವರೆಗೆ ಆಗಸ್ಟ್ 2009ರ ವಿದ್ಯಾರ್ಥಿಗಳ ಪ್ರವೇಶ ಪಟ್ಟಿಯನ್ನು ಅನುಮೋದನೆಗೆ ಸಲ್ಲಿಸದಿರುವ ಸಂಯೋಜನೆ ಹೊಂದಿರುವ ಪ್ರತಿ ಘಟಕಕ್ಕೆ ರೂ. 10,000/- ದ ಜೊತೆಗೆ ದಿನ ಒಂದಕ್ಕೆ ರೂ. 500/-ರ ರಂತೆ ದಂಡ ಶುಲ್ಕ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಮಹಿಬೂಬಸಾಬ
ಪೀಠಾಧಿಕಾರಿ,ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

ಪಿ.ಆರ್. 1002

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ: ಪಿಡಿ 05 ಐಎಂಎಂ 2011 ದಿನಾಂಕ: 05/03/2011.
2. ದಿನಾಂಕ: 24/03/2011ರ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2011-12ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4575-60-800-0-01-132 ಅಡಿಯಲ್ಲಿ ರೂ. 30000.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಪಿಡಿ 17 ಐಎಂಎಂ 2005, ದಿನಾಂಕ: 10/08/2005ರನ್ವಯ ಹಾಗೂ ದಿನಾಂಕ: 24/03/2011ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2011-12ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 49 ಯೋವಿವಿ 2011 ಬೆಂಗಳೂರು, ದಿನಾಂಕ 31/03/2011**

2011-12ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಲೆಕ್ಕಶೀರ್ಷಿಕೆ 4575-60-800-0-01-132 ಅಡಿಯಲ್ಲಿ ರೂ.30000.00 ಲಕ್ಷಗಳ ಯೋಜನೆಗೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ. ಚಿಕ್ಕರಾಜು
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 1003

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ: ಪಿಡಿ 05 ಐಎಂಎಂ 2011 ದಿನಾಂಕ: 05/03/2011.

2. ದಿನಾಂಕ 24-03-2011ರ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಯಡಿ 2011-12ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2515-00-800-0-01-101 ಅಡಿಯಲ್ಲಿ ರೂ. 130.00 ಲಕ್ಷಗಳು, ಲೆಕ್ಕಶೀರ್ಷಿಕೆ 4515-00-800-0-01-132 ಅಡಿಯಲ್ಲಿ ರೂ. 3370.00 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515-00-800-0-01-422 ಅಡಿಯಲ್ಲಿ ರೂ. 700.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515-00-800-0-03-423 ಅಡಿಯಲ್ಲಿ ರೂ. 300.00 ಲಕ್ಷಗಳಂತೆ ಒಟ್ಟು ರೂ. 4500.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಪಿಡಿ 17 ಐಎಂಎಂ 2005, ದಿನಾಂಕ: 10/08/2005ರನ್ವಯ ಹಾಗೂ ದಿನಾಂಕ: 24/03/2011ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2011-12ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 12 ಹೈಕಮಂ 2011 ಬೆಂಗಳೂರು, ದಿನಾಂಕ: 31/03/2011**

2011-12ನೇ ಸಾಲಿನ ಆಯವ್ಯಯದಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಗೆ ಲೆಕ್ಕಶೀರ್ಷಿಕೆ 2515-00-800-0-01-101 ಅಡಿಯಲ್ಲಿ ರೂ. 130.00 ಲಕ್ಷಗಳು, ಲೆಕ್ಕಶೀರ್ಷಿಕೆ 4515-00-800-0-01-132 ಅಡಿಯಲ್ಲಿ ರೂ. 3370.00 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515-00-800-0-01-422 ಅಡಿಯಲ್ಲಿ ರೂ. 700.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515-00-800-0-01-423 ಅಡಿಯಲ್ಲಿ ರೂ. 300.00 ಲಕ್ಷಗಳಂತೆ ಒಟ್ಟು ರೂ. 4500.00 ಲಕ್ಷಗಳನ್ನು ಯೋಜನೆಗೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಬಿ. ಚಿಕ್ಕರಾಜು
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 1004

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಜರುಗಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ :** 1. ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಬೆಂಗಳೂರು ಇವರ ಆದೇಶ ಸಂಖ್ಯೆ: ಆರ್‌ಸಿಎಸ್/ಎಲ್‌ಡಿಬಿ-2/18/2010-11, ದಿನಾಂಕ: 29/12/2010.

2. ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ ಅಧ್ಯಕ್ಷರ ಪತ್ರ ಸಂಖ್ಯೆ: ಪಿ.ಆರ್/ಪಿ.ಎಸ್/40/2010-11, ದಿನಾಂಕ: 01/03/2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31/03/2011ರ ಒಳಗಾಗಿ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರು ಅನುಮತಿ ನೀಡಿರುತ್ತಾರೆ.

ಮೇಲೆ ಓದಲಾದ (2)ರ ಅಧ್ಯಕ್ಷರ ಪತ್ರದಲ್ಲಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ ಮಾರ್ಚಿ 2011ರಲ್ಲಿ ರಾಜ್ಯ ಹಾಗೂ ಪ್ರಾಥಮಿಕ ಬ್ಯಾಂಕಿನ ಸಿಬ್ಬಂದಿ ವರ್ಗದವರು ವಸೂಲಿ ಕಾರ್ಯದಲ್ಲಿ ನಿರತರಾಗಿರುವುದರಿಂದ ವಾರ್ಷಿಕ ಮಹಾ ಸಭೆ ನಡೆಸಲು ಅನಾನುಕೂಲವಾಗಿರುತ್ತದೆ. ಅಲ್ಲದೇ ಬ್ಯಾಂಕು ನಷ್ಟದಲ್ಲಿರುವುದರಿಂದ 2009-10ನೇ ಸಾಲಿನ ಸರ್ವ ಸದಸ್ಯರ ಹಾಗೂ 2010-11ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಒಟ್ಟಿಗೆ ನಡೆಸುವುದು ಬ್ಯಾಂಕಿನ ಹಿತದೃಷ್ಟಿಯಿಂದ ಅನುಕೂಲವೆಂದು ಆಡಳಿತ ಮಂಡಳಿಯು ನಿರ್ಣಯಿಸಿರುತ್ತಾರೆ ಎಂದು ತಿಳಿಸಿ ಕಾಲಾವಕಾಶ ನೀಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 58 ಸಿಎಲ್‌ಎಂ 2011, ದಿನಾಂಕ 22/03/2011**

ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಬೆಂಗಳೂರು ಇದರ 2009-10ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30/09/2011ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30/09/2011ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎಸ್. ನೂಲಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1005

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ: 31/03/2011ರೊಳಗೆ ನಡೆಸಬೇಕಾಗಿರುವ ಅಕ್ಷಯ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು, ಅಕ್ಷಯ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ರವರ ಮನವಿ ಪತ್ರ.

**ಪ್ರಸ್ತಾವನೆ :**

ಅಕ್ಷಯ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಗೆ ದಿನಾಂಕ: 31/03/2011 ರೊಳಗೆ ನಡೆಸಬೇಕಾಗಿದ್ದ ಚುನಾವಣೆಯನ್ನು ಮೇಲೆ ಓದಲಾದ(1)ರ ಅಧ್ಯಕ್ಷರ ಪತ್ರದಲ್ಲಿ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಗಳು ನಡೆಯುತ್ತಿರುವ ಹಿನ್ನೆಲೆಯಲ್ಲಿ ಬಹುತೇಕ ಸದಸ್ಯರು ಚುನಾವಣೆಯಲ್ಲಿ ಪಾಲ್ಗೊಳ್ಳಲು ಕಷ್ಟವಾಗುವುದರಿಂದ ದಿನಾಂಕ: 31/03/2011 ರಿಂದ ದಿನಾಂಕ: 30/06/2011ರ ವರೆಗೆ ಮೂರು ತಿಂಗಳ ಅವಧಿಗೆ ಚುನಾವಣೆಯನ್ನು ಮುಂದೂಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ

**ಸರ್ಕಾರದ ಆದೇಶ ಸಂಖ್ಯೆ: ಸಿಓ 54 ಸಂಮಾಸ 2011, ದಿನಾಂಕ: 28/03/2011**

ಮೇಲಿನ ಪರಿಸ್ಥಿತಿಯಲ್ಲಿ ಅಕ್ಷಯ ಪತ್ತಿನ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ: 30/06/2011 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:–**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30/06/2011ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎಸ್. ನೂಲಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1006

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ಖಾತರಿ ಕಮಿಷನ್ ರೂ. 208.78 ಲಕ್ಷಗಳನ್ನು ಸರ್ಕಾರದ ಬಾಕಿ ಖಾತರಿ ಕಮಿಷನ್‌ಗೆ ಹೊಂದಾಣಿಕೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಅಇ/03/ಬಿಎಸ್‌ಜಿ/2010, ದಿನಾಂಕ: 29/01/2011.
2. ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರಸಂಖ್ಯೆ: ಆರ್‌ಸಿಎಸ್/ಬಿಯುಡಿ/145/ಶೆಅ/2010–11, ದಿನಾಂಕ: 01/02/2011.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತರವರ ಪತ್ರ ದಿನಾಂಕ: 10/02/2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರದ ಆರ್ಥಿಕ ಇಲಾಖೆ 2010–11ನೇ ಸಾಲಿನ ಪೂರಕ ಅಂದಾಜುಗಳಲ್ಲಿ ಸಹಕಾರ ಇಲಾಖೆಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತ–ಬಡ್ಡಿ ಸಹಾಯ ಧನ ಲೆಕ್ಕ ಶೀರ್ಷಿಕೆ 2425–00–108–0–64ರಲ್ಲಿ ರೂ. 208.78 ಲಕ್ಷಗಳ ಸಹಾಯ ಧನವನ್ನು ಸರ್ಕಾರಕ್ಕೆ ಪಾವತಿಸಬೇಕಾದ ಖಾತರಿ ಕಮಿಷನ್ ಹೊಂದಾಣಿಕೆ ಮಾಡಲು ಅವಕಾಶ ಕಲ್ಪಿಸಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತಕ್ಕೆ ಸಂಬಂಧಿಸಿದಂತೆ ರಸಗೊಬ್ಬರ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯು ಕೃಷಿ ಇಲಾಖೆಗೆ ವರ್ಗಾವಣೆ ಹೊಂದಿರುವುದರಿಂದ ಇದನ್ನು ಕೃಷಿ ಇಲಾಖೆಯು

ಕ್ರಮವಹಿಸಬೇಕೆಂದು ತಿಳಿಸಿರುತ್ತಾರೆ. ಮೇಲೆ ಓದಲಾದ (3)ರ ಪತ್ರದಲ್ಲಿ 2010–11ನೇ ಸಾಲಿನ ಪೂರಕ ಅಂದಾಜುಗಳಲ್ಲಿ ನೀಡಲಾಗಿರುವ ಸಹಾಯಧನ ರೂ. 208.78 ಲಕ್ಷಗಳು 2008–09ನೇ ಹಣಕಾಸಿನ ವರ್ಷಕ್ಕೆ ಸಂಬಂಧಿಸಿದ್ದು ಈ ಅವಧಿಯಲ್ಲಿ ಸದರಿ ಯೋಜನೆಯು ಸಹಕಾರ ಇಲಾಖೆಯಲ್ಲಿ ಇದ್ದುದರಿಂದ ಪ್ರಸ್ತುತ ನೀಡಲಾಗಿರುವ ರೂ. 208.78 ಲಕ್ಷಗಳ ಬಡ್ಡಿ ಸಹಾಯಧನವನ್ನು ಸಹಕಾರ ಇಲಾಖೆಯಿಂದಲೇ ಬಿಡುಗಡೆಗೊಳಿಸಿ ಹೊಂದಾಣಿಕೆ ಮಾಡುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತರವರ ಕೋರಿಕೆಯನ್ನು ಪರಿಗಣಿಸಿ ರೂ.208.78 ಲಕ್ಷಗಳನ್ನು ಬಿಡುಗಡೆ ಮಾಡಿ ಸರ್ಕಾರದ ಬಾಕಿ ಖಾತರಿ ಕಮಿಷನ್‌ಗೆ ಹೊಂದಾಣಿಕೆ ಮಾಡುವ ಕುರಿತು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 37 ಸಂಮಾಸ 2011, ಬೆಂಗಳೂರು, ದಿನಾಂಕ 21/03/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ಖಾತರಿ ಕಮಿಷನ್ ರೂ. 208.78 ಲಕ್ಷಗಳನ್ನು ಸರ್ಕಾರದ ಬಾಕಿ ಖಾತರಿ ಕಮಿಷನ್‌ಗೆ ಹೊಂದಾಣಿಕೆ ಮಾಡಲು ಅನುವಾಗುವಂತೆ ರೂ. 208.78 ಲಕ್ಷಗಳನ್ನು (ರೂಪಾಯಿ ಇನ್ನೂರ ಎಂಟು ಲಕ್ಷದ ಎಪ್ಪತ್ತೆಂಟು ಸಾವಿರಗಳು ಮಾತ್ರ) ಲೆಕ್ಕಶೀರ್ಷಿಕೆ 2425–00–108–0–64 ಅಡಿ ಬಿಡುಗಡೆ ಮಾಡಿ ಸರ್ಕಾರದ ಬಾಕಿ ಖಾತರಿ ಕಮಿಷನ್ ಲೆಕ್ಕಶೀರ್ಷಿಕೆ 0075–00–108–0–01 ಗ್ಯಾರಂಟಿ ಫೀಸ್‌ಗೆ ಹೊಂದಾಣಿಕೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲೆ ತಿಳಿಸಿದ ಮೊತ್ತವನ್ನು 2010–11ನೇ ಸಾಲಿನ ಲೆಕ್ಕಪತ್ರ ಪುಸ್ತಕದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲು ಮಹಾಲೇಖಪಾಲರು (ಲೆಕ್ಕಪತ್ರ ಮತ್ತು ರಹದಾರಿ), ಕರ್ನಾಟಕ ರಾಜ್ಯ, ಬೆಂಗಳೂರು ಇವರನ್ನು ಕೋರಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 89 ವೆಚ್ಚ–2/2011, ದಿನಾಂಕ 01–03–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಆರ್.ಎಸ್. ನೂಲಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 1007

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ ಗ್ರಾಮದ ಹತ್ತಿರ ಕೃಷ್ಣಾ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಸೇತುವೆ ಸಹಿತ ಬ್ಯಾರೇಜನ್ನು ಜಲ ಸಂಪನ್ಮೂಲ ಇಲಾಖೆಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ ಮುಇಂ/ಸನೀ(ಉ)ವ/ಬಿಜೆಪಿ/ಎಇ–1/2010–11/1635, ದಿನಾಂಕ 25–03–2011.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ ಹಾಗೂ ಯಡೂರ ಗ್ರಾಮಗಳ ನಡುವೆ ಕೃಷ್ಣಾ ನದಿಗೆ ಅಡ್ಡಲಾಗಿ, ಕೃಷ್ಣಾ, ಧೂದಗಂಗಾ ಹಾಗೂ ವೇದಗಂಗಾ ನದಿಗಳ ಸಂಗಮ ಸ್ಥಳದಲ್ಲಿ ಸೇತುವೆ ಸಹಿತ ಬ್ಯಾರೇಜ್‌ನ್ನು 1981–82 ಸಾಲಿನಲ್ಲಿ ನಿರ್ಮಿಸಲಾಗಿರುತ್ತದೆ. ಸದರಿ ಯೋಜನೆಯ ಅಚ್ಚುಕಟ್ಟು ಪ್ರದೇಶವು 2226 ಹೆಕ್ಟೇರ್ ಆಗಿದ್ದು, ಸಣ್ಣ ನೀರಾವರಿ ಯೋಜನೆಯ ವ್ಯಾಪ್ತಿಯನ್ನು ಮೀರಿರುತ್ತದೆ. ಪ್ರಸ್ತುತ ಈ ಸೇತುವೆ ಸಹಿತ ಬ್ಯಾರೇಜ್ ಶಿಥಿಲಾವಸ್ಥೆಯಲ್ಲಿದ್ದು ಅದರ ದುರಸ್ತಿ ಅಥವಾ ಪುನರ್ ನಿರ್ಮಾಣ ಕಾರ್ಯವನ್ನು ಕೈಗೊಳ್ಳುವುದು ಅವಶ್ಯವಿರುತ್ತದೆ. ಸದರಿ ವಿಷಯವು ಜಲ ಸಂಪನ್ಮೂಲ ಇಲಾಖೆಯ ಪರಿಶೀಲನೆಯಲ್ಲಿದ್ದು ಸೂಕ್ತ ಕ್ರಮ ಕೈಗೊಳ್ಳುವ ಸಲುವಾಗಿ ಅಸ್ತಿತ್ವದಲ್ಲಿರುವ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಗೆ ವರ್ಗಾಯಿಸಲು ಪರಿಗಣಿಸಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 18 ಅಪಿಬಿಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ 01ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ ಗ್ರಾಮದ ಹತ್ತಿರ ಕೃಷ್ಣಾ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಸೇತುವೆ ಸಹಿತ ಬ್ಯಾರೇಜನ್ನು ಜಲ ಸಂಪನ್ಮೂಲ ಇಲಾಖೆಗೆ ವಹಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1014

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "4702-436 ಮತ್ತು 4711-436 -ನಬಾರ್ಡ್ ಕಾಮಗಾರಿಗಳು ಅಡಿಯಲ್ಲಿ ಒದಗಿಸಿರುವ ಅನುದಾನವನ್ನು ಮರು ಹಂಚಿಕೆ ಹಾಗೂ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 35 ಆವಿಸಂ 2010, ದಿನಾಂಕ 04-05-2010.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 441 ಬಿಆರ್‌ಎಸ್ 2010, ಬೆಂಗಳೂರು, ದಿನಾಂಕ 30.03.2011.
3. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಎಫ್‌ಡಿ 441 ಬಿಆರ್‌ಎಸ್ 2010, ಬೆಂಗಳೂರು, ದಿನಾಂಕ 31.03.2011.
4. ಸರ್ಕಾರದ ಆದೇಶ ಸಂಖ್ಯೆ : ಸನೀಇ 21 ಆವಿಸಂ 2011, ದಿನಾಂಕ 30-03-2011.

**ಪ್ರಸ್ತಾವನೆ :**

2010-11ನೇ ಸಾಲಿನ ನೀರಾವರಿಯ ಸವಿವರ ವೆಚ್ಚ ಅಂದಾಜುಗಳ ಆಯವ್ಯಯದಲ್ಲಿ ಸಣ್ಣ ನೀರಾವರಿ ಇಲಾಖೆಗೆ ಲೆಕ್ಕಶೀರ್ಷಿಕೆ "4702-436-ನಬಾರ್ಡ್ ಕಾಮಗಾರಿಗಳು, ಹಾಗೂ 4711-436- ಪ್ರವಾಹ ನಿಯಂತ್ರಣ ನಬಾರ್ಡ್ ಕಾರ್ಯಗಳು" ಅಡಿಯಲ್ಲಿ ನೀಡಿದ್ದ ಅನುದಾನವನ್ನು ಇತರ ಲೆಕ್ಕ ಶೀರ್ಷಿಕೆ ಅನುದಾನದೊಂದಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, (ಉತ್ತರ) ವಲಯ, ಬಿಜಾಪುರ ಹಾಗೂ ಸಣ್ಣ ನೀರಾವರಿ, (ದಕ್ಷಿಣ) ವಲಯ, ಬೆಂಗಳೂರು ರವರಿಗೆ ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹಂಚಿಕೆ ಮಾಡಲಾಗಿರುತ್ತದೆ. ಆದರೆ ಪ್ರಸ್ತುತ ವಾಸ್ತವಿಕ ಅವಶ್ಯಕತೆಗೆ ತಕ್ಕಂತೆ ಬಾಕಿ ಬಿಲ್ಲುಗಳು/ವೆಚ್ಚವನ್ನು ಆಧರಿಸಿ ಕೆಳಕಂಡ ಲೆಕ್ಕ ಶೀರ್ಷಿಕೆಗಳಲ್ಲಿ ಅನುದಾನವನ್ನು ಮರು ಹೊಂದಾಣಿಕೆ ಮಾಡಿ ಆರ್ಥಿಕ ಇಲಾಖೆಯು ಕ್ರಮಾಂಕ (2) ರಲ್ಲಿ ಓದಲಾದ ಆದೇಶವನ್ನು ಹೊರಡಿಸಿ ನಂತರ ಅದಕ್ಕೆ ಕ್ರಮಾಂಕ (3) ರಲ್ಲಿನ ತಿದ್ದುಪಡಿ ಆದೇಶವನ್ನು ಹೊರಡಿಸಿರುತ್ತದೆ. ಆದ್ದರಿಂದ ಕ್ರಮಾಂಕ (4) ರಲ್ಲಿನ ಆದೇಶದಲ್ಲಿ ನೀಡಿದ್ದ ಅನುದಾನದ ಹಂಚಿಕೆಯನ್ನು ಕೆಳಕಂಡಂತೆ ಮಾರ್ಪಡಿಸಲು ಪರಿಗಣಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಮರು ಹೊಂದಾಣಿಕೆ ಮೂಲಕ ಹೆಚ್ಚಿಸಿರುವ ಅನುದಾನ | ಅನುದಾನದ ಹಂಚಿಕೆ | |
|---|---|---|---|---|
| | | | ದಕ್ಷಿಣ ವಲಯ ಬೆಂಗಳೂರು | ಉತ್ತರ ವಲಯ ಬಿಜಾಪುರ |
| 1 | 2 | 3 | 4 | 5 |
| 1 | 4702-00-101-5-01-436 ಅಣೆಕಟ್ಟು ಮತ್ತು ಪಿಕಪ್ | 1,020.47 | 260.00 | 760.47 |
| 2 | 4711-01-103-1-00-436 ಪ್ರವಾಹ ನಿಯಂತ್ರಣ ನಬಾರ್ಡ್ ಕಾಮಗಾರಿಗಳು | 150.00 | 150.00 | 0.00 |

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲ್ಕಂಡ ತಃಖ್ತೆಯಲ್ಲಿ ತಿಳಿಸಿರುವಂತೆ ಅನುದಾನವನ್ನು ಹಂಚಿಕೆ ಹಾಗೂ ಬಿಡುಗಡೆ ಮಾಡಲು ಆದೇಶವನ್ನು ಹೊರಡಿಸಲು ಪರಿಗಣಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 21 ಆವಿಸಂ 2011, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 31-03-2011ರ ಆರ್ಥಿಕ ಇಲಾಖೆಯು ಹೊರಡಿಸಿರುವ ಸರ್ಕಾರದ ಆದೇಶದಲ್ಲಿ 2010-11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "4702-00-101-5-01-436 ಅಣೆಕಟ್ಟು ಮತ್ತು ಪಿಕಪ್" ಮತ್ತು ಲೆಕ್ಕಶೀರ್ಷಿಕೆ "4711-01-103-1-00-436 ಪ್ರವಾಹ ನಿಯಂತ್ರಣ ನಬಾರ್ಡ್ ಕಾಮಗಾರಿಗಳು" ಗಳಡಿ ಮರು ಹೊಂದಾಣಿಕೆ ಮೂಲಕ ನೀಡಿರುವ ಹೆಚ್ಚುವರಿ ಅನುದಾನವನ್ನು ಕೆಳಕಂಡ ತಃಖ್ತೆಯಲ್ಲಿ ತಿಳಿಸಿರುವಂತೆ ಹಂಚಿಕೆ ಹಾಗೂ ಬಿಡುಗಡೆ ಮಾಡಿ ಸರ್ಕಾರವು ಅನುಮೋದನೆ ನೀಡಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಮರು ಹೊಂದಾಣಿಕೆ ಮೂಲಕ ಹೆಚ್ಚಿಸಿರುವ ಅನುದಾನ | ಅನುದಾನದ ಹಂಚಿಕೆ | |
|---|---|---|---|---|
| | | | ದಕ್ಷಿಣ ವಲಯ ಬೆಂಗಳೂರು | ಉತ್ತರ ವಲಯ ಬಿಜಾಪುರ |
| 1 | 2 | 3 | 4 | 5 |
| 1 | 4702-00-101-5-01-436 ಅಣೆಕಟ್ಟು ಮತ್ತು ಪಿಕಪ್ | 1,020.47 | 260.00 | 760.47 |
| 2 | 4711-01-103-1-00-436 ಪ್ರವಾಹ ನಿಯಂತ್ರಣ ನಬಾರ್ಡ್ ಕಾಮಗಾರಿಗಳು | 150.00 | 150.00 | 0.00 |

ಈ ಮೊತ್ತವನ್ನು ಮರು ಹಂಚಿಕೆ ಮಾಡಿದ ಲೆಕ್ಕಶೀರ್ಷಿಕೆಯ ಬಾಬ್ತಿಗೆ ಮಾತ್ರ ವೆಚ್ಚ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ತಿದ್ದುಪಡಿ ಆದೇಶ ಸಂಖ್ಯೆ : ಎಫ್‌ಡಿ 441 ಬಿಆರ್‌ಎಸ್ 2010, ದಿನಾಂಕ 31-03-11 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಪಿ.ಆರ್. 1015

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** ಧಾರವಾಡ ಜಿಲ್ಲಾಧಿಕಾರಿಗಳ ಪತ್ರ ಸಂ: ಸಿಎಎಲ್/ಸಿಆರ್/131/2010-11, ದಿನಾಂಕ 02-02-2011.

**ಪ್ರಸ್ತಾವನೆ :**

ಮೇಲೆ ಓದಲಾದ ಧಾರವಾಡ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆದು, ಈ ಡೀಸೆಲ್ ಜನರೇಟರ್‌ನಿಂದ ಪಡೆದಂತ ವಿದ್ಯುಚ್ಛಕ್ತಿಯನ್ನು ಮನೆ ನಿರ್ಮಾಣಕ್ಕೆ ನೀರನ್ನು ಒದಗಿಸಲು ಬಳಸಿಕೊಂಡಿರುತ್ತದೆ. ಆದುದರಿಂದ, ಈ ಡೀಸೆಲ್ ಜನರೇಟರ್‌ನ ಬಾಡಿಗೆಯ ಹಣ ಮತ್ತು ವಾಟರ್ ಟ್ಯಾಂಕರ್ ಬಾಬ್ತು ರೂ. 11,67,664.00 ಗಳನ್ನು ಬಿಡುಗಡೆ ಮಾಡುವಂತೆ ಧಾರವಾಡ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 400 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ 28ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ಮತ್ತು ವಾಟರ್ ಟ್ಯಾಂಕರ್ ಬಾಬ್ತು ರೂ.11,67,664.00 (ರೂಪಾಯಿ ಹನ್ನೊಂದು ಲಕ್ಷದ ಅರವತ್ತೇಳು ಸಾವಿರದ ಆರುನೂರ ಅರವತ್ತ ನಾಲ್ಕು ಮಾತ್ರ)ಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ಇವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 Public Contributions to the Calamity Relief ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್-8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಾಲಕೃಷ್ಣಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿ.ನಿ. & ಸೇವೆಗಳು-2).

ಪಿ.ಆರ್. 1016

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ಹೊನ್ನಾಳಿ ಗ್ರಾಮದ ಸ.ನಂ. 29 ರಲ್ಲಿ 10.16 ಎಕರೆ ಜಮೀನನ್ನು ಶ್ರೀ ಚನ್ನಪ್ಪ ಸ್ವಾಮಿ ವಿದ್ಯಾಪೀಠ, ಹಿರೇಕಲ್ಮಠ, ಹೊನ್ನಾಳಿ ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಶಾಶ್ವತ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಬೆಂಗಳೂರು ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ ಸಿಆರ್/160/089-09, ದಿನಾಂಕ 24-12-2009.

**ಪ್ರಸ್ತಾವನೆ :**

1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಬೆಂಗಳೂರು ರವರ ದಿನಾಂಕ 24-12-2009 ರ ಪತ್ರದಲ್ಲಿ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ಹೊನ್ನಾಳಿ ಗ್ರಾಮದ ಸ.ನಂ. 29ರಲ್ಲಿ 10.16 ಎಕರೆ ಜಮೀನನ್ನು ಶ್ರೀ ಚನ್ನಪ್ಪ ಸ್ವಾಮಿ ವಿದ್ಯಾಪೀಠ, ಹಿರೇಕಲ್ಮಠ, ಹೊನ್ನಾಳಿ ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿರುವ ಸದರಿ ಜಮೀನನ್ನು ಶಾಶ್ವತವಾಗಿ ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಶ್ರೀ ಚನ್ನಪ್ಪ ಸ್ವಾಮಿ ವಿದ್ಯಾಪೀಠ, ಹಿರೇಕಲ್ಮಠ, ರವರಿಗೆ ಈ ಹಿಂದೆ ಹೊನ್ನಾಳಿ ಗ್ರಾಮದ ಸ.ನಂ. 29 ರಲ್ಲಿನ 10.16 ಎಕರೆ ಗೋಮಾಳ ಜಮೀನನ್ನು ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ 10.16 ಎಕರೆ ಜಮೀನಿಗೆ ಎಕರೆ ಒಂದಕ್ಕೆ ರೂ.50/- (ಐವತ್ತು ರೂಪಾಯಿಗಳು ಮಾತ್ರ) ಗುತ್ತಿಗೆ ದರ ವಿಧಿಸಿ, ಶೈಕ್ಷಣಿಕ ಉದ್ದೇಶಕ್ಕಾಗಿ 15 ವರ್ಷಗಳ ಅವಧಿಗೆ ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 60 ಎಲ್‌ಜಿಎಸ್ 86, ದಿನಾಂಕ 3-4-1987ರ ಆದೇಶದಲ್ಲಿ ಗುತ್ತಿಗೆ ಆಧಾರದ ಮೇಲೆ ಮಂಜೂರಾತಿ ನೀಡಲಾಗಿತ್ತು. ಸದರಿ ಗುತ್ತಿಗೆ ಅವಧಿಯು ದಿನಾಂಕ 2-4-2002ಕ್ಕೆ ಮುಗಿದಿರುತ್ತದೆ. ನಂತರ ಸದರಿ ಗುತ್ತಿಗೆ ಅವಧಿಯನ್ನು ದಿನಾಂಕ 2-4-2002 ರಿಂದ ಮುಂದಿನ 15 ವರ್ಷಗಳ ಅವಧಿಗೆ ಗುತ್ತಿಗೆ ಅವಧಿಯನ್ನು ಮುಂದುವರಿಸಲು ಸರ್ಕಾರದ ಪತ್ರ ಸಂಖ್ಯೆ ಆರ್‌ಡಿ 39 ಎಲ್‌ಜಿಸಿ 2004 ದಿನಾಂಕ 5-8-2004 ರ ಪತ್ರದಲ್ಲಿ ಅನುಮತಿ ನೀಡಲಾಗಿರುತ್ತದೆ.

3. ಈ ಮಧ್ಯೆ ಸಂಸ್ಥೆಯವರು ಸದರಿ ಜಮೀನನ್ನು ಶಾಶ್ವತವಾಗಿ ಮಂಜೂರು ಮಾಡಲು ಮಂಜೂರಾತಿ ಕೋರಿರುವ ಹಿನ್ನೆಲೆಯಲ್ಲಿ ಪ್ರಾದೇಶಿಕ ಆಯುಕ್ತರು ಅವರ ದಿನಾಂಕ 24-12-2009ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ ಗುತ್ತಿಗೆ ಆಧಾರದ ಮೇಲೆ ನೀಡಲಾಗಿರುವ ಜಮೀನಿನಲ್ಲಿ ಪ್ರಥಮ ದರ್ಜೆ ಕಾಲೇಜು, ಪದವಿಪೂರ್ವ ಕಾಲೇಜು, ಬಿ.ಇಡಿ. ಮತ್ತು ಡಿ.ಇಡಿ. ಕಾಲೇಜುಗಳು, ಕೈಗಾರಿಕಾ ತರಬೇತಿ ಕೇಂದ್ರ, ಪ್ರೌಢ ಶಾಲೆಗಳ ಶಾಶ್ವತ ಕಟ್ಟಡಗಳನ್ನು ನಿರ್ಮಿಸಲಾಗಿರುತ್ತದೆ. ಈ ಸಂಸ್ಥೆಯಡಿಯಲ್ಲಿ ನಡೆಸುತ್ತಿರುವ ಕಾಲೇಜು, ಪ್ರೌಢ ಶಾಲೆ, ತರಬೇತಿ ಕೇಂದ್ರಗಳಿಗೆ ಈ ಜಮೀನು ಶಾಶ್ವತವಾಗಿ ಮಂಜೂರಾಗದಿದ್ದಲ್ಲಿ ವಿಶ್ವವಿದ್ಯಾಲಯದ ಧನ ಸಹಾಯ ಮತ್ತು ಆಯೋಗದ ಧನ ಸಹಾಯ

ಹಾಗೆಯೇ ತರಬೇತಿ ಸಂಸ್ಥೆಗಳಿಗೆ NCTE ರವರು ಮಾನ್ಯತೆ ನವೀಕರಿಸಿರುವುದಿಲ್ಲ. ಕಾರಣ ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ಜಮೀನನ್ನು ಶಾಶ್ವತವಾಗಿ ಮಂಜೂರು ಮಾಡಬೇಕೆಂದು ಸಂಸ್ಥೆಯವರು ಕೋರಿರುತ್ತಾರೆಂದು ವರದಿ ಮಾಡುತ್ತಾ, ಹೊನ್ನಾಳಿ ಗ್ರಾಮದ ಸ.ನಂ. 29 ರಲ್ಲಿ 10.16 ಎಕರೆ ಜಮೀನನ್ನು ನವೀಕರಿಸಲಾದ ಗುತ್ತಿಗೆ ಅವಧಿಯನ್ನು ಮಾರ್ಪಡಿಸಿ ಶಾಶ್ವತವಾಗಿ ಮಂಜೂರು ಮಾಡಲು ಸರ್ಕಾರದ ಮಟ್ಟದಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 5 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2011**

ಶ್ರೀ ಚನ್ನಪ್ಪ ಸ್ವಾಮಿ ವಿದ್ಯಾಪೀಠ, ಹಿರೇಕಲ್ಮಠ, ಹೊನ್ನಾಳಿ ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿರುವ ಹೊನ್ನಾಳಿ ತಾಲ್ಲೂಕು ಹೊನ್ನಾಳಿ ಗ್ರಾಮದ ಸ.ನಂ. 29 ರಲ್ಲಿನ 10.16 ಎಕರೆ ಜಮೀನನ್ನು ಸದರಿ ಜಮೀನಿನ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ.2,60,000/– (ರೂಪಾಯಿ ಎರಡು ಲಕ್ಷದ ಅರವತ್ತು ಸಾವಿರ ಮಾತ್ರ) ಹಾಗೂ ನಿಯಮಾನುಸಾರ ಇತರ ಶುಲ್ಕಗಳನ್ನು ವಿಧಿಸಿ ಶಾಶ್ವತವಾಗಿ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 1017

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ.1 ರಲ್ಲಿ 1–00 ಎಕರೆ ಜಮೀನನ್ನು ಪರಿಶಿಷ್ಟ ಜಾತಿಯವರಿಗೆ ನಿವೇಶನ ಹಂಚಿಕೆಗಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿಸಿಆರ್/19/10–11, ದಿನಾಂಕ 8–5–2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ.1 ರಲ್ಲಿ ಒಟ್ಟು 2143.36 ಎಕರೆ ಅಮೃತ್ ಮಹಲ್ ಕಾವಲ್ ಜಮೀನಿರುತ್ತದೆ. ಇದರಲ್ಲಿ 1410.00 ಎಕರೆ ಜಮೀನನ್ನು ಬಾಬಾ ಅಣು ಸಂಶೋಧನೆ ಕೇಂದ್ರಕ್ಕೆ, ಇಸ್ರೋ ಸಂಸ್ಥೆಗೆ 473.20 ಎಕರೆ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಕ್ಕೆ 250–00 ಎಕರೆ ಜಮೀನು ಮಂಜೂರಾತಿಗೆ ಪ್ರಸ್ತಾಪಿಸಲಾಗಿದೆ. ಇದೇ ಸ.ನಂ. ನಲ್ಲಿ 1–00 ಎಕರೆ ಜಮೀನನ್ನು ನಿವೇಶನ ರಹಿತ ಪರಿಶಿಷ್ಟ ಜಾತಿಯ ಕುಟುಂಬದವರಿಗೆ ಮಂಜೂರಾತಿ ನೀಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 48 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ 21ನೇ ಡಿಸೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ತಳುಕು ಹೋಬಳಿ, ಉಳ್ಳರ್ತಿ ಕಾವಲ್ ಸ.ನಂ.1 ರಲ್ಲಿ 1–00 ಎಕರೆ ಅಮೃತ್ ಮಹಲ್ ಕಾವಲ್ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4) ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 18(ಎ) ರನ್ವಯ ನಿವೇಶನ ರಹಿತರಿಗೆ ಉಚಿತವಾಗಿ ನಿವೇಶನ ಹಂಚಲು, ಸದರಿ 1–00 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 71 ರಡಿ ಕಾಯ್ದಿರಿಸಿ ಚಳ್ಳಕೆರೆ ತಾಲ್ಲೂಕು ಪಂಚಾಯಿತಿಗೆ ಹಸ್ತಾಂತರಿಸಲು ಆದೇಶಿಸಿದೆ.

ಈ ಆದೇಶವನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಂಮಿ : 09 : ಅಮಾಭೂ 2010, ದಿನಾಂಕ 4–11–2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 1018

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು, ಹ್ಯಾರಡ ಗ್ರಾಮದ ಸ.ನಂ. 297/7 (ಪಿ) ರಲ್ಲಿ 18.53 ಎಕರೆ ಮತ್ತು ಹೆಚ್. ಬಸಾಪುರ ಗ್ರಾಮದ ಸ.ನಂ. 254(ಪಿ)ರಲ್ಲಿ 23.52 ಎಕರೆ ಜಮೀನನ್ನು ಗಾಳಿ ಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ॥ ಸರ್ಜನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರ ಪತ್ರ ಸಂಖ್ಯೆ : ಕಂಭೂಮಿ/160/10–11, ದಿನಾಂಕ 23–6–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು, ಹ್ಯಾರಡ ಗ್ರಾಮದ ಸ.ನಂ. 297/7 (ಪಿ) ರಲ್ಲಿ 18.53 ಎಕರೆ ಮತ್ತು ಬಸಾಪುರ ಗ್ರಾಮದ ಸ.ನಂ. 254(ಪಿ)ರಲ್ಲಿ 23.52 ಎಕರೆ ಜಮೀನನ್ನು ಗಾಳಿ ಯಂತ್ರದಿಂದ

ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ॥ ಸರ್ಜನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2. ಪ್ರಸ್ತಾವನೆ ಪರಿಶೀಲಿಸಲಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಹ್ಯಾರಡ ಗ್ರಾಮದ ಸ.ನಂ. 297/7 (ಪಿ) ರಲ್ಲಿನ ಜಮೀನು ಆರ್‌ಟಿಸಿಯ ಕಲಂ 9 ರಲ್ಲಿ ನೆಡುತೋಪುಗಾಗಿ ಲ್ಯಾಂಡ್ ಬ್ಯಾಂಕ್ ಎಂಬುದಾಗಿ ವರ್ಗೀಕೃತಗೊಂಡಿದ್ದು 502.28 ಎಕರೆ ಇರುತ್ತದೆ. ಹಾಗೆಯೇ ಸದರಿ ಸರ್ವೆ ನಂಬರ್‌ನಲ್ಲಿ ಸರ್ಕಾರ ಎಂಬುದಾಗಿ ವರ್ಗೀಕೃತಗೊಂಡಿದ್ದು 206.44 ಎಕರೆ ಇರುತ್ತದೆ. ಹೆಚ್. ಬಸಾಪುರ ಗ್ರಾಮದ ಸ.ನಂ. 254(ಪಿ)ರಲ್ಲಿನ ಜಮೀನು ಆರ್‌ಟಿಸಿಯ ಕಲಂ 9 ರಲ್ಲಿ ಸರ್ಕಾರಿ ಪರಂಪೋಕು ಎಂಬುದಾಗಿ ವರ್ಗೀಕೃತಗೊಂಡಿದ್ದು 143.27 ಎಕರೆ ಇರುತ್ತದೆ.

3. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಅವರ ದಿನಾಂಕ 23–6–2010 ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ ಹ್ಯಾರಡ ಗ್ರಾಮದ ಸ.ನಂ. 297 (ಪಿ) ವಿಸ್ತೀರ್ಣ 18.53 ಎಕರೆ ಮತ್ತು ಹೆಚ್. ಬಸಾಪುರ ಗ್ರಾಮದ ಸ.ನಂ. 254(ಪಿ) ವಿಸ್ತೀರ್ಣ 23.52 ಎಕರೆ ಜಮೀನುಗಳು ಗಾಯಾಳು ಜಮೀನುಗಳಾಗಿದ್ದು, ಎತ್ತರ ಪ್ರದೇಶವಿದ್ದು, ಗಾಳಿಯಂತ್ರಗಳನ್ನು ಅಳವಡಿಸಲು ಯೋಗ್ಯವಿರುತ್ತದೆ. ಸದರಿ ಪ್ರದೇಶ ಕಲ್ಲುಮಟ್ಟಿ ಹಾಗೂ ತಗ್ಗುದಿಣ್ಣೆಗಳಿಂದ ಕೂಡಿದ್ದು, ದೊಡ್ಡ ಗಿಡಮರಗಳು ಬೆಳೆದಿರುವುದಿಲ್ಲ. ಸದರಿ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿರುವುದಿಲ್ಲ. ಸದರಿ ಜಮೀನುಗಳಲ್ಲಿ ಪುರಾತನ ಸ್ಮಾರಕಗಳು, ಗುಡಿಗೋಪುರಗಳು ಇರುವುದಿಲ್ಲ. ಜಮೀನುಗಳಲ್ಲಿ ಹೈ–ಟೆನ್ಷನ್ ವಿದ್ಯುತ್ ಲೈನುಗಳು ಹಾದು ಹೋಗಿರುವುದಿಲ್ಲ. ಸದರಿ ಜಮೀನಿಗೆ ರಸ್ತೆ ಸೌಲಭ್ಯವಿದ್ದು, ಪವನ್ ವಿದ್ಯುತ್ ಘಟಕ ಸ್ಥಾಪಿಸಲು ಸಾರ್ವಜನಿಕರಿಂದ ಯಾವ ಆಕ್ಷೇಪಣೆ ಇರುವುದಿಲ್ಲ ಎಂಬುದಾಗಿ ಅಭಿಪ್ರಾಯಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 34 ಎಲ್‌ಜಿಇ 2010, ಬೆಂಗಳೂರು, ದಿನಾಂಕ 25ನೇ ಫೆಬ್ರವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು, ಹ್ಯಾರಡ ಗ್ರಾಮದ ರಿ.ಸ.ನಂ. 297/7 (ಪಿ) ರಲ್ಲಿನ 206.44 ಎಕರೆ ಸರ್ಕಾರಿ ಜಮೀನಿನ ಪೈಕಿ 18.53 ಎಕರೆ ಮತ್ತು ಹರವಿ ಬಸಾಪುರ ಗ್ರಾಮದ ರಿ.ಸ.ನಂ. 254(ಪಿ)ರಲ್ಲಿನ 143.27 ಎಕರೆ ಸರ್ಕಾರಿ ಪರಂಪೋಕು ಜಮೀನಿನ ಪೈಕಿ 23.52 ಎಕರೆ ಒಟ್ಟು 42.05 ಎಕರೆ ಜಮೀನನ್ನು ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ.10 ರಷ್ಟು ಗುತ್ತಿಗೆ ದರ ನಿಗದಿಪಡಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10 ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(ಬಿ) ರನ್ವಯ 30 ವರ್ಷಗಳ ಅವಧಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಉದ್ದೇಶಕ್ಕಾಗಿ ಮೆ॥ ಸರ್ಜನ್ ರಿಯಾಲಿಟೀಸ್ ಲಿಮಿಟೆಡ್ ರವರಿಗೆ ಗುತ್ತಿಗೆ ನೀಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ. ಸದರಿ ಗುತ್ತಿಗೆಯ ವಿಧಿವಿಧಾನಗಳ ಬಗ್ಗೆ ಜಿಲ್ಲಾಧಿಕಾರಿಗಳು, ಸರ್ಕಾರಿ ಸುತ್ತೋಲೆ ಸಂಖ್ಯೆ ಆರ್‌ಡಿ 78/ಎಲ್‌ಜಿಪಿ/ 2009, ದಿನಾಂಕ 4–1–2011 ರಲ್ಲಿನ ಸೂಚನೆಗಳನ್ವಯ ಸದರಿ ಸಂಸ್ಥೆಯವರೊಂದಿಗೆ ನೇರವಾಗಿ ವ್ಯವಹರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/887/ವೆಚ್ಚ–7/2010, ದಿನಾಂಕ 6–1–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಜಿ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 1019

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲೂಕಿನ ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಗ್ರಾಮಗಳ ಜಮೀನನ್ನು ಪ್ರತಿಷ್ಠಿತ ಸಂಸ್ಥೆಗಳಾದ ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರ ಬಾಹ್ಯಾಕಾಶ ಇಲಾಖೆ, ಬಾಬಾ ಅಣು ಸಂಶೋಧನಾ ಕೇಂದ್ರ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ನಿಗಮ ನಿಯಮಿತ ಹಾಗೂ ಇನ್ನಿತರ ಸಂಸ್ಥೆಗಳಿಗೆ ಮಂಜೂರು ಮಾಡಲಾಗಿದ್ದು, ಸದರಿ ಸಂಸ್ಥೆಗಳ ಕಾರ್ಯಚಟುವಟಿಕೆಗಳ ಉಸ್ತುವಾರಿಗಾಗಿ ಉನ್ನತ ಮಟ್ಟದ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಪತ್ರ ಸಂಖ್ಯೆ : ASHA/CR/234/10–11, ದಿನಾಂಕ 11–8–2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲೂಕಿನ ಅಮೃತ್ ಮಹಲ್ ಕಾವಲ್ ಹಾಗೂ ವರಾವು ಕಾವಲ್ ಜಮೀನನ್ನು ಪ್ರತಿಷ್ಠಿತ ಸಂಸ್ಥೆಗಳಾದ DRDO, ISRO, IISc, BARC, KSIIDC, CRPF ಹಾಗೂ ಇತರೆ ಸಂಸ್ಥೆಗಳಿಗೆ ಮಂಜೂರು ಮಾಡಲಾಗಿದ್ದು, ಈ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಸರ್ವಾಂಗೀಣ ಅಭಿವೃದ್ಧಿಪಡಿಸುವ ಸಲುವಾಗಿ ಮತ್ತು ಜಿಲ್ಲೆಯ ಮುಂದಿನ ವರ್ಷಗಳ ಅಭಿವೃದ್ಧಿಗಳನ್ನು ಗಮನದಲ್ಲಿಟ್ಟುಕೊಂಡು ಹಮ್ಮಿಕೊಳ್ಳಲು ಉದ್ದೇಶಿಸಲಾಗಿರುವ ಹಲವಾರು ಕಾರ್ಯಕ್ರಮಗಳನ್ನು ವಿವರಿಸುತ್ತಾ, ಈ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಒಂದು ಉನ್ನತ ಮಟ್ಟದ "ಖುದಾಪುರ ಅಭಿವೃದ್ಧಿ ಸಮಿತಿ" ಮತ್ತು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು "ಸ್ಥಳೀಯ ಕಾರ್ಯನಿರ್ವಹಣಾ ಸಮಿತಿಯನ್ನು" ರಚಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

**ಉನ್ನತ ಮಟ್ಟದ ಖುದಾಪುರ ಅಭಿವೃದ್ಧಿ ಸಮಿತಿ**

| | | |
|---|---|---|
| 1) | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2) | ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 3) | ಪ್ರಧಾನ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಇಲಾಖೆ | ಸದಸ್ಯರು |
| 4) | ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 5) | ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |

6) ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಸದಸ್ಯರು
7) ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಸದಸ್ಯರು
8) ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನಾ ಇಲಾಖೆ ಸದಸ್ಯರು
9) ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಇಲಾಖೆ ಸದಸ್ಯರು
10) ವ್ಯವಸ್ಥಾಪಕ ನಿರ್ದೇಶಕರುಗಳು, BESCOM, KSRTC, KUWSDB, KPTCL ಸದಸ್ಯರು
11) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಸದಸ್ಯರು
12) ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಚಿತ್ರದುರ್ಗ ಸದಸ್ಯರು
13) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಚಿತ್ರದುರ್ಗ ಸದಸ್ಯರು
14) ಇತರೆ ಫಲಾನುಭವಿ ಸಂಸ್ಥೆಗಳಾದ ಸದಸ್ಯರು
   I. IISc ಸದಸ್ಯರು
   II. BARC ಸದಸ್ಯರು
   III. KSIIDC ಸದಸ್ಯರು
   IV. CRPF ಸದಸ್ಯರು
   V. DRDO ಸದಸ್ಯರು
   VI. ISRO ಸದಸ್ಯರು

**ಸ್ಥಳೀಯ ಕಾರ್ಯನಿರ್ವಹಣಾ ಸಮಿತಿ**

1) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಅಧ್ಯಕ್ಷರು
2) ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಚಿತ್ರದುರ್ಗ ಸದಸ್ಯರು
3) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಚಿತ್ರದುರ್ಗ ಸದಸ್ಯರು
4) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಚಿತ್ರದುರ್ಗ ಸದಸ್ಯರು
5) ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಸದಸ್ಯರು
6) ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕೆ.ಎಸ್.ಆರ್.ಟಿ.ಸಿ. ಸದಸ್ಯರು
7) ಆಯುಕ್ತರು, ಚಿತ್ರದುರ್ಗ ನಗರ ಅಭಿವೃದ್ಧಿ ಪ್ರಾಧಿಕಾರ ಸದಸ್ಯರು
8) ಕಾರ್ಯನಿರ್ವಾಹಕ ಇಂಜಿನಿಯರ್, ಬೆಸ್ಕಾಂ ಸದಸ್ಯರು
9) ಉಪ ವಿಭಾಗಾಧಿಕಾರಿಗಳು, ತಹಶೀಲ್ದಾರ್, ಚಳ್ಳಕೆರೆ ಸದಸ್ಯರು
10) ಮತ್ತು ಇತರೆ ಫಲಾನುಭವಿ ಸಂಸ್ಥೆಗಳು ಸದಸ್ಯರು

**ಉನ್ನತ ಮಟ್ಟದ ಖುದಾಪುರ ಅಭಿವೃದ್ಧಿ ಸಮಿತಿ ಹಾಗೂ ಸ್ಥಳೀಯ ಕಾರ್ಯನಿರ್ವಹಣಾ ಸಮಿತಿಗಳ ಕಾರ್ಯನಿರ್ವಹಣೆ ಈ ಕೆಳಕಂಡಂತಿರುತ್ತದೆ ಎಂಬುದಾಗಿ ವರದಿ ಮಾಡಿದ್ದಾರೆ**

a) The HLC may work out the modalities of fund pooling by the stakeholder agencies to set up the basic infrastructure.
b) The HLC may oversee the shifting of the “Sheep Farm” at Kudhapura and Ullarthikaval entirely to outskirts of the township and converting 294 acres of land to public purpose and allotment of the same for various purposes.
c) The HLC may oversee and decide upon allotment of available 400 acres of land in Varavu Kaval for future requests.
d) The HLC may allot to the local management committee a budget for administrative expenses and to outsource the land usage plan and infrastructure Estimation to a competent agency.
e) The LMC may coordinate with concerned agencies to obtain necessary permission for all activities, tender the works, workout the inter se shares of stakeholders and ensure the shares are paid into a fund.
f) The LMC may manage the common and public purpose lands, develop the same and purpose allotment to various agencies, purposes.
g) The LMC may be dissolved on completion of all activities and after the setting up of a “Notified Area of Kudhapura” or “Industrial Area of Kudhapura” under the relevant proviso of the Karnataka Muncipalities Act (section 3).
h) The HLC may continue.

**ಸರ್ಕಾರದ ಆದೇಶ ಸಂಖ್ಯೆ: ಕಂಇ 64 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ 14ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲೂಕಿನ ಉಳ್ಳರ್ತಿ ಕಾವಲ್ ಹಾಗೂ ಖುದಾಪುರ ಗ್ರಾಮಗಳಲ್ಲಿರುವ ಅಮೃತ್ ಮಹಲ್ ಕಾವಲ್ ಹಾಗೂ ವರಾವು ಕಾವಲ್ ಜಮೀನುಗಳನ್ನು ಪ್ರತಿಷ್ಠಿತ ಸಂಸ್ಥೆಗಳಾದ ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರ ಬಾಹ್ಯಾಕಾಶ ಇಲಾಖೆ, ಬಾಬಾ ಅಣು ಸಂಶೋಧನಾ ಕೇಂದ್ರ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ನಿಗಮ ನಿಯಮಿತ ಹಾಗೂ ಇನ್ನಿತರ ಸಂಸ್ಥೆಗಳಿಗೆ ಮತ್ತು ಸಾರ್ವಜನಿಕ ಉದ್ದೇಶಕ್ಕಾಗಿ ಹಾಗೂ ಟೌನ್‌ಶಿಪ್ ಅಭಿವೃದ್ಧಿಗಾಗಿ ಮಂಜೂರು ಮಾಡಲಾಗಿರುವ/ಕಾಯ್ದಿರಿಸಲಾಗಿರುವ ಈ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿ, ಈ ಪ್ರದೇಶಗಳನ್ನು ಸರ್ವಾಂಗೀಣ ಅಭಿವೃದ್ಧಿಪಡಿಸುವ ಸಲುವಾಗಿ ಮತ್ತು ಜಿಲ್ಲೆಯ ಮುಂದಿನ ವರ್ಷಗಳ ಅಭಿವೃದ್ಧಿಗಳನ್ನು ಗಮನದಲ್ಲಿಟ್ಟುಕೊಂಡು ಹಮ್ಮಿಕೊಳ್ಳಲು ಉದ್ದೇಶಿಸಲಾಗಿರುವ ಹಲವಾರು ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಾಗೂ ಸದರಿ ಕಾರ್ಯಚಟುವಟಿಕೆಗಳ ಉಸ್ತುವಾರಿಗಾಗಿ ಮುಖ್ಯ

ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ಹಾಗೂ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ಥಳೀಯ ಕಾರ್ಯನಿರ್ವಹಣಾ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಲಾಗಿದೆ.

**ಉನ್ನತ ಮಟ್ಟದ ಖುದಾಪುರ ಅಭಿವೃದ್ಧಿ ಸಮಿತಿ**

| | | |
|---|---|---|
| 1) | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2) | ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 3) | ಪ್ರಧಾನ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಇಲಾಖೆ | ಸದಸ್ಯರು |
| 4) | ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 5) | ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |
| 6) | ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 7) | ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 8) | ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನಾ ಇಲಾಖೆ | ಸದಸ್ಯರು |
| 9) | ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಇಲಾಖೆ | ಸದಸ್ಯರು |
| 10) | ವ್ಯವಸ್ಥಾಪಕ ನಿರ್ದೇಶಕರುಗಳು, BESCOM, KSRTC, KUWSDB, KPTCL | ಸದಸ್ಯರು |
| 11) | ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ | ಸದಸ್ಯರು |
| 12) | ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಚಿತ್ರದುರ್ಗ | ಸದಸ್ಯರು |
| 13) | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಚಿತ್ರದುರ್ಗ | ಸದಸ್ಯರು |
| 14) | ಇತರೆ ಫಲಾನುಭವಿ ಸಂಸ್ಥೆಗಳಾದ | ಸದಸ್ಯರು |
| | I. IISc | ಸದಸ್ಯರು |
| | II. BARC | ಸದಸ್ಯರು |
| | III. KSIIDC | ಸದಸ್ಯರು |
| | IV. CRPF | ಸದಸ್ಯರು |
| | V. DRDO | ಸದಸ್ಯರು |
| | VI. ISRO | ಸದಸ್ಯರು |

**ಸ್ಥಳೀಯ ಕಾರ್ಯನಿರ್ವಹಣಾ ಸಮಿತಿ**

| | | |
|---|---|---|
| 1) | ಜಿಲ್ಲಾಧಿಕಾರಿಗಳು, ಚಿತ್ರದುರ್ಗ | ಅಧ್ಯಕ್ಷರು |
| 2) | ಸೂಪರಿಂಟೆಂಡೆಂಟ್ ಆಫ್ ಪೋಲಿಸ್, ಚಿತ್ರದುರ್ಗ | ಸದಸ್ಯರು |
| 3) | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಚಿತ್ರದುರ್ಗ | ಸದಸ್ಯರು |
| 4) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಚಿತ್ರದುರ್ಗ | ಸದಸ್ಯರು |
| 5) | ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ | ಸದಸ್ಯರು |
| 6) | ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕೆ.ಎಸ್.ಆರ್.ಟಿ.ಸಿ. | ಸದಸ್ಯರು |
| 7) | ಆಯುಕ್ತರು, ಚಿತ್ರದುರ್ಗ ನಗರ ಅಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 8) | ಕಾರ್ಯನಿರ್ವಾಹಕ ಇಂಜಿನಿಯರ್, ಬೆಸ್ಕಾಂ | ಸದಸ್ಯರು |
| 9) | ಉಪ ವಿಭಾಗಾಧಿಕಾರಿಗಳು, ತಹಶೀಲ್ದಾರ್, ಚಳ್ಳಕೆರೆ | ಸದಸ್ಯರು |
| 10) | ಮತ್ತು ಇತರೆ ಫಲಾನುಭವಿ ಸಂಸ್ಥೆಗಳು | ಸದಸ್ಯರು |

**ಉನ್ನತ ಮಟ್ಟದ ಖುದಾಪುರ ಅಭಿವೃದ್ಧಿ ಸಮಿತಿ ಹಾಗೂ ಸ್ಥಳೀಯ ಕಾರ್ಯನಿರ್ವಹಣಾ ಸಮಿತಿಗಳ ಕಾರ್ಯನಿರ್ವಹಣೆ ಈ ಕೆಳಕಂಡಂತಿರುತ್ತದೆ**

a) The HLC may work out the modalities of fund pooling by the stakeholder agencies to set up the basic infrastructure.
b) The HLC may oversee the shifting of the “Sheep Farm” at Kudhapura and Ullarthikaval entirely to outskirts of the township and converting 294 acres of land to public purpose and allotment of the same for various purposes.
c) The HLC may oversee and decide upon allotment of available 400 acres of land in Varavu Kaval for future requests.
d) The HLC may allot to the local management committee a budget for administrative expenses and to outsource the land usage plan and infrastructure Estimation to a competent agency.
e) The LMC may coordinate with concerned agencies to obtain necessary permission for all activities, tender the works, workout the inter se shares of stakeholders and ensure the shares are paid into a fund.
f) The LMC may manage the common and public purpose lands, develop the same and purpose allotment to various agencies, purposes.
g) The LMC may be dissolved on completion of all activities and after the setting up of a “Notified Area of Kudhapura” or “Industrial Area of Kudhapura” under the relevant proviso of the Karnataka Muncipalities Act (section 3).
h) The HLC may continue.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಲಕ್ಷ್ಮೀನಾರಾಯಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 1020

## ವಸತಿ ಸಚಿವಾಲಯ

**ವಿಷಯ :** ಸರ್ಕಾರಿ ಖಾತರಿ ಮೇರೆಗೆ ಪಡೆದ ಸಾಲಕ್ಕೆ ಸರ್ಕಾರಕ್ಕೆ ಗ್ಯಾರಂಟಿ ಕಮೀಷನ್ ಪಾವತಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರಗಳ ಸಂಖ್ಯೆ : ಕಕೊನಿಮ/ ಲೆ.ಪ.ಶಾ : ಸ.ಖಾತರಿ : 2009-10/713, ದಿನಾಂಕ 21-12-2009.

ಪ್ರಸ್ತಾವನೆ :

ಮೇಲೆ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರದಲ್ಲಿ ಸರ್ಕಾರಿ ಖಾತರಿ ಮೇರೆಗೆ ಮಂಡಳಿ ಹುಡ್ಕೋ ಸಂಸ್ಥೆಯಿಂದ ರೂ. 24408.70 ಲಕ್ಷಗಳ ಸಾಲವನ್ನು ಸರ್ಕಾರಿ ಖಾತರಿ ಮೇರೆಗೆ ಪಡೆದಿದ್ದು, ದಿನಾಂಕ : 31-3-2009ರ ಅಂತ್ಯಕ್ಕೆ ರೂ. 5,67,90,737 ಗಳ ಗ್ಯಾರಂಟಿ ಕಮೀಷನ್‌ಗಳನ್ನು ಜಮಾ ಮಾಡಿರುತ್ತದೆ. ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ರಾಜ್ಯಾದ್ಯಂತ ವಿವಿಧ ನಗರ/ಪಟ್ಟಣಗಳಲ್ಲಿ ಬರುವ ಕೊಳಚೆ ಪ್ರದೇಶದಲ್ಲಿ ಬಡತನ ರೇಖೆಗಿಂತ ಕೆಳ ದರ್ಜೆಯಲ್ಲಿ ವಾಸಿಸುತ್ತಿರುವ ಕೊಳಚೆ ನಿವಾಸಿಗಳಿಗೆ ಅವರು ವಾಸಿಸುವ ಸ್ಥಳಗಳಲ್ಲಿ ಹುಡ್ಕೋ ಸಂಸ್ಥೆಯಿಂದ ಸಾಲವನ್ನು ಪಡೆದು ಮನೆಗಳನ್ನು ನಿರ್ಮಿಸಲಾಗಿರುತ್ತದೆ. ಸದರಿ ಮನೆಗಳನ್ನು ನಿರ್ಮಿಸುವ ಸಲುವಾಗಿ ಸರ್ಕಾರದ ಖಾತರಿ ಮೇರೆಗೆ ಹುಡ್ಕೋ ಸಂಸ್ಥೆಯು ಮಂಡಳಿಗೆ ಯೋಜನೆಗಳನ್ನು ಆಧರಿಸಿ ಸಾಲವನ್ನು ನೀಡುತ್ತ ಬಂದಿರುತ್ತದೆ. ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಸಂಪೂರ್ಣವಾಗಿ ಸರ್ಕಾರದ ಅನುದಾನವನ್ನು ಅಬಲಂಬಿಸಿ ಕಾರ್ಯನಿರ್ವಹಿಸುತ್ತಿರುತ್ತದೆ. ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯವನ್ನು ಒದಗಿಸಲು ಹಾಗೂ ಹುಡ್ಕೋ ಸಾಲವನ್ನು ಮರು ಪಾವತಿಸಲು ಸರ್ಕಾರವೇ ಮಂಡಳಿಗೆ ಅನುದಾನವನ್ನು ಬಿಡುಗಡೆ ಮಾಡುತ್ತಾ ಬಂದಿರುತ್ತದೆ. ಸರ್ಕಾರದ ಖಾತರಿ ಮೇರೆಗೆ ಪಡೆದಿರುವ ಸಾಲಕ್ಕೆ ಗ್ಯಾರಂಟಿ ಕಮೀಷನ್‌ನ್ನು ಸರ್ಕಾರಕ್ಕೆ ಕಟ್ಟಲು ಮಂಡಳಿಯು ಶಕ್ತವಾಗಿರುವುದಿಲ್ಲ. ಹಾಗೂ ಮಂಡಳಿಗೆ ಪ್ರತ್ಯೇಕವಾದ ಆದಾಯವಿರುವುದಿಲ್ಲ ಹಾಗೂ ಸಂಪೂರ್ಣವಾಗಿ ರಾಜ್ಯ ಸರ್ಕಾರದ ಅನುದಾನವನ್ನು ಅವಲಂಬಿಸಿರುತ್ತದೆ. ಆದಕಾರಣ ಮಂಡಳಿಯು ಸರ್ಕಾರಕ್ಕೆ ಕಟ್ಟಬೇಕಾದ ಬಾಕಿ ಸರ್ಕಾರದ ಖಾತರಿ ಕಮೀಷನ್ ಹಣವನ್ನು ಮನ್ನಾ ಮಾಡಿ ಆದೇಶ ಹೊರಡಿಸುವಂತೆ ಅಥವಾ ಸರ್ಕಾರದ ಗ್ಯಾರಂಟಿ ಕಮೀಷನ್ ಹಣವನ್ನು ಕಟ್ಟಲು ರೂ. 567.91 ಲಕ್ಷಗಳ ಅನುದಾನವನ್ನು ಮಂಡಳಿಗೆ ಬಿಡುಗಡೆ ಮಾಡಬೇಕೆಂದು ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ದಿನಾಂಕ : 31-3-2009ರ ಅಂತ್ಯಕ್ಕೆ ಹುಡ್ಕೋ ಸಂಸ್ಥೆಯ ಸಾಲದ ಒಟ್ಟು ಬಾಬ್ತು ಅಸಲು ರೂ. 7986.16 ಲಕ್ಷಗಳು ಬಾಕಿ ಇರುತ್ತದೆ.

ಸರ್ಕಾರದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 41 ಕೊಮಂಲೆ 2005, ಬೆಂಗಳೂರು, ದಿನಾಂಕ : 30-3-2011**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಸರ್ಕಾರದ ಖಾತರಿ ಮೇರೆಗೆ ಹುಡ್ಕೋ ಸಂಸ್ಥೆಯಿಂದ ಪಡೆದಿರುವ ಸಾಲದ ಮೇಲಿನ ಖಾತರಿ ಕಮೀಷನ್ ಬಾಬ್ತು ದಿನಾಂಕ : 31-3-2009 ರ ಅಂತ್ಯಕ್ಕೆ ಬಾಕಿ ಇರುವ ರೂ. 567.91 ಲಕ್ಷಗಳನ್ನು ಸರ್ಕಾರಕ್ಕೆ ಪಾವತಿಸುವುದಕ್ಕೆ 2010-11ನೇ ಸಾಲಿನ ಲೆಕ್ಕ ಶೀರ್ಷಿಕೆ 2217-04-191-2-01:101 G1A ಯೋಜನೇತರಡಿ ಪೂರಕ ಅಂದಾಜು-1 ರಲ್ಲಿ ರೂ. 567.91 ಲಕ್ಷ (ಐದು ಕೋಟಿ ಅರವತ್ತೇಳು ಲಕ್ಷದ ತೊಂಭತ್ತೊಂದು ಸಾವಿರ ರೂ.ಗಳು ಮಾತ್ರ)ಗಳ ಅನುದಾನವನ್ನು ಒದಗಿಸುವುದಕ್ಕೆ ಆರ್ಥಿಕ ಇಲಾಖೆ ಸಹಮತಿ ನೀಡಿದ್ದು, ಸದರಿ ಮೊತ್ತವನ್ನು SE-I ಗೆ Authourisation ಹೊಂದಿದ ನಂತರದಲ್ಲಿ ಲೆಕ್ಕ ಶೀರ್ಷಿಕೆ 0075-0-108-0-01 ಗ್ಯಾರಂಟಿ ಫೀ ರಡಿ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

ಈ ಹೊಂದಾಣಿಕೆಯನ್ನು ವರಿಷ್ಠ ಮಹಾಲೇಖಪಾಲರು (A & E) ರವರು 2010-11ನೇ ಸಾಲಿನ ವಾರ್ಷಿಕ ಲೆಕ್ಕದಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕೆಂದು ಕೋರಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 373 ವೆಚ್ಚ-9/2010, ದಿನಾಂಕ : 29-6-2010ರ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

ಪಿ.ಆರ್. 1021

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಫೆಬ್ರವರಿ 2011ರಲ್ಲಿ ಬೆಂಗಳೂರಿನಲ್ಲಿ ನಡೆದ ಏರೋ ಇಂಡಿಯಾ ಷೋ 2011 ರ ಸಂಬಂಧ ಕನ್ನಡ ಮತ್ತು ಇಂಗ್ಲೀಷ್ ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡಿದ ಬಾಬ್ತು ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರರವರ ಪತ್ರ ಸಂಖ್ಯೆ : KUM/GPAD/953/AD4/ 2010-11, ದಿನಾಂಕ : 10-2-2011.

ಪ್ರಸ್ತಾವನೆ :

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಪತ್ರದಲ್ಲಿ, ಫೆಬ್ರವರಿ 2011 ರಲ್ಲಿ ಬೆಂಗಳೂರಿನಲ್ಲಿ ನಡೆದ ಏರೋ ಇಂಡಿಯಾ ಷೋ 2011ರ ಸಂಬಂಧ ದಿನಾಂಕ : 9, 10 ಮತ್ತು 11, ಫೆಬ್ರವರಿ 2011 ರಲ್ಲಿ ರಾಜ್ಯದ ಹಾಗೂ ನವದೆಹಲಿಯ ಆವೃತ್ತಿಯ ವಿವಿಧ ಆಂಗ್ಲ ಹಾಗೂ ಕನ್ನಡ ದಿನಪತ್ರಿಕೆಗಳಲ್ಲಿ ರಾಜ್ಯದ ನೂತನ ಕೈಗಾರಿಕಾ ನೀತಿಯಡಿ ವಿಶ್ವ ಬಂಡವಾಳ ಹೂಡಿಕೆ ವಿವರ, ಸಮ್ಮೇಳನದಲ್ಲಿ ಒಡಂಬಡಿಕೆಯಾದ ಉದ್ದಿಮೆಗಳ ಅನುಷ್ಠಾನ ಹಾಗೂ ಏರೋ ಸ್ಪೇಸ್ ಕೈಗಾರಿಕೆಗಳಿಗೆ ಕರ್ನಾಟಕದಲ್ಲಿರುವ ಅವಕಾಶಗಳನ್ನು ಬಿಂಬಿಸುವ ಬಗ್ಗೆ ಜಾಹೀರಾತು ನೀಡಿದ ಸಂಬಂಧ ವೆಚ್ಚ ಭರಿಸಲು ರೂ. 200.00 ಲಕ್ಷಗಳ (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ) ಅವಶ್ಯಕತೆ ಇದೆ. ಈ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರರವರಿಗೆ ಬಿಡುಗಡೆ ಮಾಡಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರರವರು ಪ್ರಸ್ತಾಪಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 117 ಎಸ್‌ಪಿಐ 2011, ಬೆಂಗಳೂರು, ದಿನಾಂಕ : 30–3–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ರವರಿಗೆ ದಿನಾಂಕ : 9,10,11 ಫೆಬ್ರವರಿ 2011 ರಂದು ಏರೋ ಇಂಡಿಯಾ ಷೋ 2011 ಸಂಬಂಧ ನವದೆಹಲಿ ಮತ್ತು ರಾಜ್ಯದಲ್ಲಿನ ಪತ್ರಿಕೆಗಳಲ್ಲಿ ಜಾಹಿರಾತು ನೀಡಿದ ಸಂಬಂಧ ರೂ. 200.00 ಲಕ್ಷಗಳನ್ನು (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2852–80–800–0–46–125 Modernisation (Non-Plan) towards Advantage of Karnataka–2010–11" ರಡಿ ಭರಿಸತಕ್ಕದು.

ಮೇಲ್ಕಂಡ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರದ ವ್ಯವಸ್ಥಾಪಕ ನಿರ್ದೇಶಕರವರು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 617 ವೆಚ್ಚ–1/2011, ದಿನಾಂಕ : 30–3–2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1022

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ಸಾಲ ಪಡೆಯಲು ಗ್ಯಾರಂಟಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ವಾಕೈ 24 ರೇಕೃವಿ 2011, ದಿನಾಂಕ : 26–2–2011.
2. ಸರ್ಕಾರಿ ಆದೇಶ ಸಂಖ್ಯೆ : ವಾಕೈ 03 ರೇಉನಿ 2011, ದಿನಾಂಕ : 7–3–2011.
3. ಸರ್ಕಾರಿ ಆದೇಶ ಸಂಖ್ಯೆ : ವಾಕೈ 03 ರೇಉನಿ 2011 (ಭಾಗ–2), ದಿನಾಂಕ : 28–3–2011.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಟಿಪ್ಪಣಿ ಸಂಖ್ಯೆ : ಕರೇಮಾಮ/ಹಣಕಾಸು/2010–11/1110, ದಿನಾಂಕ : 28–2–2011,
5. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ : ಕರೇಮಾಮ/ಎಫ್&ಎ/2010–11/143, ದಿನಾಂಕ : 19–3–2011.

ಪ್ರಸ್ತಾವನೆ :

ರೇಷ್ಮೆಗೂಡಿನ ಬೆಲೆಯಲ್ಲಿ ಒಮ್ಮೆಲೆ ಕುಸಿತ ಉಂಟಾದ ಹಿನ್ನೆಲೆಯಲ್ಲಿ ರೇಷ್ಮೆ ಬೆಲೆಯಲ್ಲಿ ಸ್ಥಿರತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ವಹಿವಾಟನ್ನು ಕೂಡಲೇ ನಿರ್ವಹಿಸುವುದಕ್ಕಾಗಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ದುಡಿಯುವ ಬಂಡವಾಳಕ್ಕಾಗಿ ರೂ. 3.00 ಕೋಟಿಗಳನ್ನು ಹಾಗೂ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ರೂ. 7.00 ಕೋಟಿಗಳನ್ನು ಹಾಗೂ ಕ್ರಮಸಂಖ್ಯೆ (3)ರ ಆದೇಶದ ರೂ. 2.00 ಕೋಟಿಗಳನ್ನು ಸಾಲದ ರೂಪದಲ್ಲಿ ಮಂಜೂರು ಮಾಡಲಾಗಿದೆ. ಹಾಗೂ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಇನ್ನೂ ಹೆಚ್ಚಿನ ದುಡಿಯುವ ಬಂಡವಾಳ ಅಗತ್ಯವಿದ್ದಲ್ಲಿ ಅದು ಬ್ಯಾಂಕ್‌ನಿಂದ ಸಾಲ ಪಡೆಯಲು ಸರ್ಕಾರದಿಂದ ಗ್ಯಾರಂಟಿ ನೀಡಲಾಗುವುದು ಎಂದು ತಿಳಿಸಿಲಾಗಿದೆ.

ಕರ್ನಾಟಕದಲ್ಲಿ ರೇಷ್ಮೆ ಗೂಡಿನ ಬೆಲೆ ಮತ್ತು ರೇಷ್ಮೆ ನೂಲಿನ ಬೆಲೆಗಳಲ್ಲಿ ಕುಸಿತ ಉಂಟಾಗಿದ್ದು, ಅದನ್ನು ಪ್ರತಿಭಟಿಸಿ, ರೇಷ್ಮೆ ಬೆಳೆಗಾರರು, ನೂಲು ಬಿಚ್ಚಾಣಿಕೆದಾರರು ಪ್ರತಿಭಟನೆ ನಡೆಸಿದ್ದು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಹಣಕಾಸಿನ ದುಸ್ಥಿತಿಯಲ್ಲಿರುವುದರಿಂದ ರೇಷ್ಮೆ ನೂಲನ್ನು ಖರೀದಿ ಮಾಡಲು ಸಾಧ್ಯವಾಗುತ್ತಿಲ್ಲವಾಗಿದ್ದು, ರೇಷ್ಮೆಗೂಡಿನ ಮಾರುಕಟ್ಟೆಯಲ್ಲಿ ಆವಕವು ಹೆಚ್ಚಾಗಿದ್ದು, ಅದನ್ನು ಖರೀದಿಸಲು ಮಂಡಳಿಗೆ ಸಾಧ್ಯವಾಗುತ್ತಿಲ್ಲವಾದ್ದರಿಂದ ಸದರಿ ಮಂಡಳಿಯು ಸಮರ್ಪಕವಾಗಿ ಕಾರ್ಯನಿರ್ವಹಿಸಲು ಅಂದರೆ ರೇಷ್ಮೆ ಬೆಲೆಯಲ್ಲಿ ಕುಸಿತ ಕಂಡುಬಂದಲ್ಲಿ ಮಧ್ಯಪ್ರವೇಶಿಸಿ ರೇಷ್ಮೆ ನೂಲನ್ನು ಖರೀದಿಸುವ ಮೂಲಕ ರೇಷ್ಮೆ ನೂಲಿನ ಬೆಲೆ ಸ್ಥಿರೀಕರಣ ಕೈಗೊಳ್ಳುವುದಕ್ಕಾಗಿ ರೂ. 35.00 ಕೋಟಿಗಳನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಒದಗಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (4) ರ ಟಿಪ್ಪಣಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಕೋರಿರುತ್ತಾರೆ ಮತ್ತು ಬ್ಯಾಂಕ್ ಸಾಲ ಪಡೆದಲ್ಲಿ ಸರ್ಕಾರ ಬ್ಯಾಂಕ್ ಗ್ಯಾರಂಟಿ ನೀಡುವುದಾಗಿ ತಿಳಿಸಿದ್ದ ಹಿನ್ನೆಲೆಯಲ್ಲಿ ಸರ್ಕಾರವು ಸಾಲ ನೀಡಿದ್ದ ಮೊತ್ತವನ್ನು ರೇಷ್ಮೆ ನೂಲು ಖರೀದಿಗೆ ಸಂಪೂರ್ಣವಾಗಿ ಬಳಸಿದ್ದು, ಮಂಡಳಿಗೆ ಇನ್ನೂ ಹೆಚ್ಚಿನ ದುಡಿಯುವ ಬಂಡವಾಳದ ಅವಶ್ಯಕತೆ ಇರುವುದರಿಂದ ರಾಷ್ಟ್ರೀಕೃತ ಕೆನರಾ ಬ್ಯಾಂಕ್‌ನಲ್ಲಿ ರೂ. 25.00 ಕೋಟಿ ಸಾಲಕ್ಕೆ ಅರ್ಜಿ ಸಲ್ಲಿಸಿದ್ದು, ಬ್ಯಾಂಕ್‌ನವರು ಸರ್ಕಾರದ ಗ್ಯಾರಂಟಿ ನೀಡುವಂತೆ ತಿಳಿಸಿರುವುದರಿಂದ ಈ ಸಾಲಕ್ಕೆ ಸರ್ಕಾರದಿಂದ ಗ್ಯಾರಂಟಿ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಲಾಗಿದ್ದು, ಕರ್ನಾಟಕದಲ್ಲಿ ರೇಷ್ಮೆ ಬೆಲೆಯಲ್ಲಿ ದಿಡೀರ್ ಕುಸಿತ ಉಂಟಾಗಿದ್ದು ಇದನ್ನು ಪ್ರತಿಭಟಿಸಿ, ರೇಷ್ಮೆ ಬೆಳೆಗಾರರು ಮುಷ್ಕರ ಹೂಡಿರುತ್ತಾರೆ. ರೇಷ್ಮೆ ಬೆಲೆ ಕುಸಿತವನ್ನು ತಡೆದು ರೇಷ್ಮೆ ಬೆಲೆಯಲ್ಲಿ ಸ್ಥಿರತೆಯನ್ನು ಉಂಟುಮಾಡಬೇಕಾದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ದಾರವನ್ನು ಖರೀದಿಸಬೇಕಾಗಿರುತ್ತದೆ ಈ ವ್ಯವಹಾರ ನಿರ್ವಹಣೆಯನ್ನು ಮಂಡಳಿಯು ಕೈಗೊಳ್ಳಬೇಕಾದಲ್ಲಿ ಸದರಿ ಮಂಡಳಿಗೆ ಸಾಕಷ್ಟು ದುಡಿಯುವ ಬಂಡವಾಳದ ಅಗತ್ಯವಿದೆ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಆರ್ಥಿಕವಾಗಿ ದುಸ್ಥಿತಿಯಲ್ಲಿದ್ದು, ಅದು ಸಮರ್ಪಕವಾಗಿ ಕೆಲಸ ನಿರ್ವಹಿಸಬೇಕಾದಲ್ಲಿ ಅದಕ್ಕೆ ದುಡಿಯುವ ಬಂಡವಾಳದ ಅಗತ್ಯವಿರುವ ಹಿನ್ನೆಲೆಯಲ್ಲಿ ಅದು ಬ್ಯಾಂಕ್‌ನಿಂದ ಸಾಲ ಪಡೆದಲ್ಲಿ ಸದರಿ ಸಾಲಕ್ಕೆ ಸರ್ಕಾರದಿಂದ ಸರ್ಕಾರದ ಗ್ಯಾರಂಟಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 03 ರೇಉನಿ 2011 (ಭಾಗ–1), ಬೆಂಗಳೂರು, ದಿನಾಂಕ : 31–3–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ಗೂಡಿನ ಬೆಲೆ ಕುಸಿತವನ್ನು ತಡೆದು ರೇಷ್ಮೆ ನೂಲಿನ ಬೆಲೆಯಲ್ಲಿ ಸ್ಥಿರತೆಯನ್ನು ಉಂಟುಮಾಡಲು ಸಮರ್ಪಕವಾಗಿ ಕಾರ್ಯನಿರ್ವಹಿಸುವುದಕ್ಕಾಗಿ ಅದಕ್ಕೆ ಅಗತ್ಯವಿರುವ ದುಡಿಯುವ ಬಂಡವಾಳಕ್ಕಾಗಿ ಅದು ಕೆನರಾ ಬ್ಯಾಂಕ್‌ನಿಂದ ರೂ. 25.00 ಕೋಟಿಗಳ (ಇಪ್ಪತ್ತೈದು ಕೋಟಿ ರೂಪಾಯಿಗಳ ಮಾತ್ರ) ಸಾಲ ಪಡೆಯುವುದಕ್ಕೆ ಸರ್ಕಾರದ ಗ್ಯಾರಂಟಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಿದೆ.

a. This guarantee is given primarily for the purpose of price stabilization of silk yarn on account of the reduction in the import duty from 30% to 5% by the Union Government. As a result, the funds should exclusively be used for undertaking price stabilization measures and not for any other internal needs of the KSMBL like payment of salaries and other administrative expenditure.

b. A separate account shall be opened by KSMBL where the proceeds of the proposed loan shall be kept and any transaction for purchase and sale of silk yarn should be escrowed only to the new account. Apart from these transactions any other transaction shall not be undertaken by the Board from this account.

c. The Board shall submit a quarterly report of the transactions undertaken from the designated account to the Government and certify that this money has not been used for any other activity.

d. The Government Guarantee is initially for the period upto $30^{th}$ September 2011.

e. Further, guarantee commission at the rate of 1% per annum shall be payable by KSMB as per Karnataka Ceiling on Government Guarantees Act, 1999.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD/523/Exp.1/2011, ದಿನಾಂಕ : 26–3–2011 ರಲ್ಲಿಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1023

## ENERGY SECRETARIAT

**Sub:** Equity support to KPTCL for FY 2010-11-reg.

**Read :**
1. G.O. No. EN 67 PSR 2009 dated : 25-3-2010 & 31-3-2010.
2. D.O. letter No. KPTCL/FA (A&R)/KCO-30/14398/09-10 dated 30-10-2010 of the Managing Director, KPTCL.
3. G.O. No. EN 20 PSR 2010 (i) dated : 20-12-2010.

**PREAMBLE :**

1. In order to facilitate power production in the State, Government vide G.O. read (1) above has released Rs. 225 crores in 2009-10 to KPTCL so as to infuse the same as equity into Karnataka Power Transmission Corporation Limited (KPTCL) for setting up Transmission Projects at various places in the State.

2. As per Para 169 of the Budget Speech 2010-11, a capital support of Rs. 500 crores to be provided during 2010-11 to KPCL/KPTCL/ESCOMs to enable them to mobilize the required capital to meet capital investment (capacity addition) projects.

3. The Managing Director, Karnataka Power Transmission Corporation Limited (KPTCL) vide D.O. letter read at (2) above has informed that KPTCL has planned to have a capital works programme of Rs. 1692 crores in FY 2010-11 and has requested the Government to release Equity amount of atleast Rs. 444 crores to KPTCL.

4. In the Budget Estimates for FY 2010-11, a provision of Rs. 500 crores has been provided under the Head of Account “4801-01-190-0-09-211 Investment in Power Utility (Plan)”. Further for FY 2010-11 provision of Rs. 500 crores in SE-2 and provision of Rs. 500 crores in SE-3 has been provided under HoA “4801-01-190-0-09-211 (Plan).

5. The request of the Managing Director, Karnataka Power Transmission Corporation Limited for release of balance amount equity has been examined by the Government and it is decided to release Rs. 200 crores to KPTCL as Equity. Hence this order.

**GOVERNMENT ORDER NO. EN 20 PSR 2010, BANGALORE, DATED : 31-3-2011**

1. Government are pleased to release a sum of Rs. 200 crores (Rupees two hundred crores only) to Karnataka Power Transmission Corporation Limited as Equity, under the head of account "4801-01-190-0-09-211 (Plan) (Investment in Power Utilities)". for undertaking capital works and reducing its debt-equity ratio.

2. Karnataka Power Transmission Corporation Limited shall obtain the counter-signature of Additional Chief Secretary to Government, Energy Department on payee's receipt and draw the amount.

3. Karnataka Power Transmission Corporation Limited shall prepare the design and monitoring frame works for each project of FY 2010-11 with investment above Rs. 5 crores as per the guidelines in Note No. CS/278/08 dated 1-8-2008 and to take Cabinet's approval for the works to be taken up by leveraging this Equity infusion as per monitorable/measurable parameters and as per a pre-determined time schedule.

4. This order is issued with concurrence of Finance Department vide their U.O. Note No. FD 618 Exp-I/11 dated 30-3-2011.

By Order and in the name of the Governor of Karnataka

**SURESH B. KRISHNAPPANAVAR**

Under Secretary to Government,

Energy Department.

P.R. 1024

## ENERGY SECRETARIAT

**Sub:** Change of company's Name from M/s Nuziveedu Seeds Limited in place of M/s NSL Renewabel Power Private Limited-reg.

**Read :**

1. Government Order No. EN 124 NCE 2003 dated : 7-8-2003.
2. Government Order No. EN 361 NCE 2006 dated : 18-8-2006.
3. Government Order No. EN 276 NCE 2007 dated : 29-8-2007.
4. Letter No. KRED/08/NSL-NSL RPPL/2011/933 dated : 14/22-3-2011 received from the Managing Director, Karnataka Renewable Energy Development Limited, Bangalore.

**PREAMBLE :**

In the Government Orders read at (1,2 &3) above, approval has been accorded for allotment of 29.25 MW, 5.00 MW and 51.00 MW wind power projects at Davangere, Gadag and Chithradurga Districts respectively in favour of M/s Nuziveedu Seeds Limited.

The Deputy Registrar of Companies, National Capital Teritory of Delhi and Haryana has issued a certificate of incorporation for change of company's name from M/s Nuziveedu Seeds Limited to M/s NSL Renewable Power Private Limited vide CIN No. U40109DL1985PTC114839 dated : 16-6-2010.

In the letter read at (4) above, as per the request of the developer the Managing Director, Karnataka Renewable Energy Development Limited, Bangalore has sent a proposal to Government for change of company's name from M/s Nuziveedu Seeds Limited to M/s NSL Renewable Power Private Limited.

The proposal has been examined in detail and hence the following Order :-

**GOVERNMENT ORDER NO. EN 175 NCE 2011, BANGALORE, DATED : 30-3-2011**

Government accords approval for the change of company's name from M/s Nuziveedu Seeds Limited to M/s NSL Renewable Power Private Limited.

The Government has reserved the power to Cancel/modify this Order.

All the allotments and agreements made in the name of M/s Nuziveedu Seeds Limited shall be transferred to M/s NSL Renewable Power Private Limited.

The other terms and conditions of the Government Orders read at 1,2 & 3 shall IPSO FACTO applicable.

By Order and in the name of the Governor of Karnataka

**SURESH B. KRISHNAPPANAVAR**

Under Secretary to Government,

Energy Department.

P.R. 1025

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಬಿದಲೂರು ಗ್ರಾಮದ ಸರ್ವೆ ನಂ. 229ರಲ್ಲಿನ ಒಟ್ಟು 9 ಎಕರೆ 38 ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರ ಟಿಪ್ಪಣಿ ಸಂಖ್ಯೆ: ಬಿಎಂಆರ್‌ಡಿಎ/BIAAPA/69/2009-10, ದಿನಾಂಕ:05/10/2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 05/10/2009ರ ಟಿಪ್ಪಣಿಯಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಸದಸ್ಯ ಕಾರ್ಯದರ್ಶಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ, ರವರು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಬಿದಲೂರು ಗ್ರಾಮದ ಸರ್ವೆ ನಂ. 229ರಲ್ಲಿನ ಒಟ್ಟು 9 ಎಕರೆ 38 ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಸಂಬಂಧ ದಿನಾಂಕ: 10/09/2009ರ ಪ್ರಜಾವಾಣಿ ಮತ್ತು ಈ ಸಂಜೆ ದಿನಪತ್ರಿಕಗಳಲ್ಲಿ ಪ್ರಕಟಿಸಿ, ಈ ಸಂಬಂಧ ಯಾವುದೇ ಸಾರ್ವಜನಿಕ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಅಭಿಪ್ರಾಯಿಸಿ, ನಂತರ ದಿನಾಂಕ: 26/09/2009ರಂದು ನಡೆದ ಪ್ರಾಧಿಕಾರದ 57ನೇ ಸಭೆಯ ವಿಷಯ ಸಂಖ್ಯೆ.4(28)ರಲ್ಲಿ ಪ್ರಸ್ತಾವನೆಯನ್ನು ಪ್ರಾಧಿಕಾರದ ಸಭೆಯ ಮುಂದೆ ಮಂಡಿಸಿ, ಪ್ರಾಧಿಕಾರದ ಸಭೆಯು ನಿರ್ಣಯಿಸಿರುವಂತೆ ನಿಗದಿತ ನಮೂನೆಯಲ್ಲಿ ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಬಿದಲೂರು ಗ್ರಾಮದ ಸರ್ವೆ ನಂ. 229ರಲ್ಲಿನ ಒಟ್ಟು 9ಎಕರೆ 38ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ.14(ಎ) ರನ್ವಯ ಭೂ ಉಪಯೋಗ ಬದಲಾವಣೆ ಮಾಡಲು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಪರಿಶೀಲಿಸಿ ನಿಗದಿತ ನಮೂನೆಯಲ್ಲಿ ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕೆಲವು ನಿಬಂಧನೆಗಳಿಗೆ ಒಳಪಟ್ಟು ಸರ್ವೆ ನಂ. 229ರಲ್ಲಿನ ಒಟ್ಟು 9 ಎಕರೆ 38 ಗುಂಟೆ ವಿಸ್ತೀರ್ಣದ ಜಮೀನನ್ನು ಭೂ ಉಪಯೋಗ ಬದಲಾವಣೆ ಮಾಡಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಕಾರಣ ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ನಅಇ 298 ಬಿಎಂಆರ್ 2009 ಬೆಂಗಳೂರು, ದಿನಾಂಕ: 05/08/2010.**

ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಬಿದಲೂರು ಗ್ರಾಮದ ಸರ್ವೆ ನಂ. 229ರಲ್ಲಿನ ಒಟ್ಟು 9 ಎಕರೆ 38 ಗುಂಟೆ ವಿಸ್ತೀರ್ಣದ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ.14(ಎ)ರ ಪ್ರಕಾರ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತಿಗೊಳಪಡಿಸಿ ಸರ್ಕಾರದ ಮಂಜೂರಾತಿ ನೀಡಿದೆ:–

1. ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ 1961ರ ಕಲಂ.18ರನ್ವಯ ಶುಲ್ಕ ಪಡೆಯತಕ್ಕದ್ದು;
2. ಭೂ ಉಪಯೋಗ ಬದಲಾವಣೆಯನ್ನು ಮಹಾಯೋಜನೆಯಲ್ಲಿ ಅಳವಡಿಸಿಕೊಳ್ಳತಕ್ಕದ್ದು;
3. ವಸತಿ ವಿನ್ಯಾಸಕ್ಕೆ/ಗ್ರೂಪ್ ಹೌಸಿಂಗ್ ಯೋಜನೆಗೆ ಪ್ರಾಧಿಕಾರದ ಅನುಮೋದನೆ ಪಡೆಯತಕ್ಕದ್ದು;
4. ಮಳೆ ನೀರು ಸಂಗ್ರಹಣೆ ಅಳವಡಿಸಿಕೊಳ್ಳತಕ್ಕದ್ದು;
5. ವಸತಿ ವಿನ್ಯಾಸಕ್ಕೆ/ಗ್ರೂಪ್ ಹೌಸಿಂಗ್ ಅಭಿವೃದ್ಧಿಗಾಗಿ ಸಂಬಂಧಿಸಿದ ಇಲಾಖೆ/ಸಕ್ಷಮ ಪ್ರಾಧಿಕಾರಗಳಿಂದ ಅಗತ್ಯ ನಿರಾಕ್ಷೇಪಣಾ ಪತ್ರಗಳನ್ನು ಪಡೆಯತಕ್ಕದ್ದು;
6. ಪ್ರಶ್ನಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಪ್ರಶ್ನಿತ ಜಮೀನಿನ ಉಪಗಮನ ರಸ್ತೆಗೆ ಸೂಕ್ತ ರಸ್ತೆ ಮಾರ್ಜಿನನ್ನು ಅಳವಡಿಸಿಕೊಳ್ಳತಕ್ಕದ್ದು;
7. ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ವಿಧಿಸಬಹುದಾದ ಇತರೆ ಷರತ್ತುಗಳು.
8. ವಲಯ ನಿಯಮಾವಳಿಯಲ್ಲಿನ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವುದು;
9. ಯಾವುದೇ ಸಿವಿಲ್ ವ್ಯಾಜ್ಯಗಳಿದ್ದಲ್ಲಿ, ನ್ಯಾಯಾಲಯದ ಆದೇಶಕ್ಕೆ ಬದ್ಧರಾಗಿರುವ, ಸುಳ್ಳು ಮಾಹಿತಿ ಅಥವಾ ಸಲ್ಲಿಸಿರುವ ಯಾವುದೇ ಮಾಹಿತಿ/ದಾಖಲೆಗಳು ತಪ್ಪಾಗಿದ್ದಲ್ಲಿ/ಫೋರ್ಜರಿ ಆಗಿದ್ದಲ್ಲಿ ಭೂ ಉಪಯೋಗ ಬದಲಾವಣೆಯು ಸ್ವಯಂಚಾಲಿತವಾಗಿ ರದ್ದಾಗುವ ನಿಬಂಧನೆಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1438

## FINANCE SECRETARIAT

**Subject: Constitution of Official Pay Committee-Orders reg.**

**GOVERNMENT ORDER NO.FD 23 SRP 2011, BANGALORE, DATED 15TH JUNE 2011**

The Hon'ble Chief Minister in the Budget Speech for the year 2011-12 has announced Government's decision to constitute an Official Pay Committee for considering various demands of the State Government Employees.

2. Accordingly, Government are now pleased to appoint an Official Pay Committee consisting of the following officers:-

| | | |
|---|---|---|
| 1. | Sri Subir Hari Singh, IAS<br>Chairman,<br>Bangalore Metropolitan Regional<br>Development Authority | Chairman |
| 2. | Sri L.V Nagarajan, IAS<br>Principal Secretary to Government,<br>Finance Department | Member |
| 3. | Dr. Subhash Chandra Khuntia, IAS<br>Principal Secretary to Government,<br>Public Works Department | Member |
| 4. | Sri Anil Kumar Jha, IAS<br>Secretary to Government (Exp.),<br>Finance Department | Member |
| 5. | Sri H. Shashidhar, IAS (Retd.), | Secretary |

3. The Terms of Reference of the Official Pay Committee will be as follows:-

a) To examine the present pay structure of employees of the State Government, Aided Educational Institutions, Local Bodies and Non-teaching Staff of the Universities i.e., excluding those who are on the UGC/AICTE/ICAR scales of pay taking into account the total packet of benefits including death-cum-retirement benefits available to the employees and to recommend new pay structure which may be feasible;

b) To examine and determine the Dearness Allowance formula with reference to existing Central Dearness Allowance formula adopted by the State Government and to suggest changes which may be feasible;

c) To examine the quantum of various allowances including House Rent Allowance, City Compensatory Allowance, etc. and Leave Travel Concession and Medical Attendance facilities and to suggest changes which may be feasible;

d) To examine the existing pattern of pension benefits and to suggest changes which may be feasible;

e) To examine such other matters as may be entrusted by the State Government.

4. In making its recommendations, the Official Pay Committee should keep in view the resources of the State Government and Government's commitments for various development programmes and schemes, statutory and regulatory functions, debt-servicing obligations and other non-development requirements within the overall mandate of the Fiscal Responsibility Management Act.

5. The Official Pay Committee should devise its own procedure, and may call for such information from various Departments as found necessary for its terms of reference.

6. All the Government departments shall furnish such information and documents and other assistance, as may be required by the Official Pay Committee. Government trust that the service Association,Local Bodies, Aided Institutions and other concerned will extend to the Official Pay Committee their fullest co-operation and assistance.

7. The Official Pay Committee shall submit its report within nine months.

By Order and in the name of the Governor of Karnataka

Sundara Raja Guptha

Deputy Secretary to Government

Finance Department (Services-2)

P.R. 1439